# ಯೇಸುವಿನ ಮಧುರವಾದ ನುಡಿಗಳು

# 1000



## இயேசு கிறிஸ்துவின் நாமத்தில் அன்பின் வாழ்த்துக்கள்

ஏறக்குறைய 7 ஆண்டுகளாக பல இடங்களிலிருந்து சேகரித்த சுமார் 200 ஆண்டுகளுக்கு முன்பு வரை அச்சடிக்கப்பட்ட, ஆரோக்கிய உபதேசங்கள் அடங்கிய, கிறிஸ்தவ ஆவிக்குரிய புத்தகங்களை, பல மணி நேரம் கொடுத்து, பல இலட்சங்கள் செலவு செய்து மின் நூல்களாக (E-Books) இலவசமாக (மத்தேயு 10:8) உங்கள் கரங்களில் கொடுப்பதற்கு, அற்பரும் நீசருமான எங்களை பயன்படுத்தின உன்னத தேவனுக்கே சகல கனமும் மகிமையும் துதியும் உரித்தாவதாக. இதைப் போன்ற இன்னும் ஆயிரக்கணக்கான புத்தகங்களை தரவிறக்கம் (Download) செய்ய எங்களுடைய இணையதளத்தை சொடுக்கவும்/பார்க்கவும்: www.WordOfGod.in

95 சதவீத புத்தகங்கள் அச்சில் இல்லாதவைகளும், காப்புரிமை முடிந்தவைகளுமே. மீதமுள்ள புத்தகங்கள், நல்ல உபதேசங்களை கொண்டிருப்பதால், முடிந்தவரை ஆசிரியரின் உரிமையோடு மின்-நூலாக, இலவசமாக வெளியிடுகிறோம். ஒருவேளை உங்களுடைய புத்தகம் இப்படி இலவசமாக மின்-நூல் (E-Book) வடிவில் வரக்கூடாது என்று நினைத்தீர்களானால், தயவு செய்து எங்களை மன்னித்துக்கொள்ளுங்கள். எங்களுடைய WhatsApp எண்ணிற்கோ, மின் அஞ்சலிலோ (Email) எங்களுக்கு தெரியப்படுத்துங்கள். உடனடியாக எங்களுடைய இணைய-தளத்திலிருந்து எடுத்துவிடுகிறோம்.

*WhatsApp/SMS: +91 90 190 490 70 / +91 7676 50 5599*
*Email: wordofgod@wordofgod.in*

## *Wishing you in the mighty name of Jesus Christ*

*We had collected several thousands of old Tamil Spiritual Books which are rich in Sound Doctrines across various places of India for 7 years. Some of them are more than 200 years old books. We have spent millions of hours and money in scanning them and coverting them to E-Books. The work is still in progress. These E-books are published completely free of cost (Matt 10:8) forever. We give all the praise and glory to God for giving this wonderful opportunity to server Him. You can download thousands of similar Tamil Christian E-books from our website www.WordOfGod.in completely free of cost at any time.*

*95% of these E-Books are not being printed now and their copyrights are already expired. The remaining books are sent as E-Books mostly with the permission from the Authors. If you feel that your books should not be published as E-Book freely, kindly execuse and forgive us. Please let us know the book details by WhatsApp or Email we will remove them from our website.*

*WhatsApp/SMS: +91 90 190 490 70 / +91 7676 50 5599*
*Email: wordofgod@wordofgod.in*

# ಯೇಸುವಿನ
# ಮಧುರವಾದ ನುಡಿಗಳು 1000
## (A THOUSAND SWEET WORDS OF JESUS)

**ಜೆ. ಸ್ಯಾಮ್ ಜೆಬದುರೈ**



ಪ್ರಕಾಶಕರು :
ಸೆಲ್ವಿನ್ ಕ್ರಿಸ್ಟೋಫರ್ ಜಾರ್ಜ್
24ನೇ 'F' ಅಡ್ಡರಸ್ತೆ, ಈಜಿಪುರ,
ವಿವೇಕನಗರ, ಬೆಂಗಳೂರು – 560 047

ಮೊದಲನೆ ಮುದ್ರಣ : ಮೇ 2002 Book No. : 92

ಕಾಣಿಕೆ - ರೂ. 10.00

*Translated by*
**MRS. SARAH JESUDOSS**
BANGALORE - 560 071

*Copies can be had from :*

SELVIN CHRISTOPHER GEORGE
24th 'F' Cross, Egipura, Viveknagar
Bangalore - 560 047
Phone : 080-25712448

## ವಿಷಯಾನುಕ್ರಮಣಿಕೆ

ಮೆ

## 1. ಪ್ರೀತಿ

1. "ನಾನು ನಿಮ್ಮನ್ನು ಪ್ರೀತಿಸಿದ ಮೇರೆಗೆ ನೀವೂ ಒಬ್ಬರನ್ನೊಬ್ಬರು ಪ್ರೀತಿಸಬೇಕೆಂಬದೇ ನಾನು ಕೊಡುವ ಆಜ್ಞೆಯಾಗಿದೆ." ಯೋಹಾ.15:12

2. "ನೀವು ಒಬ್ಬರನ್ನೊಬ್ಬರು ಪ್ರೀತಿಸಬೇಕೆಂತಲೇ ಇವುಗಳನ್ನು ನಿಮಗೆ ಆಜ್ಞಾಪಿಸುತ್ತೇನೆ." ಯೋಹಾನ 15:17

3. "ನಾನು ನಿಮಗೆ ಒಂದು ಹೊಸ ಆಜ್ಞೆಯನ್ನು ಕೊಡುತ್ತೇನೆ; ಏನಂದರೆ ನೀವು ಒಬ್ಬರನ್ನೊಬ್ಬರು ಪ್ರೀತಿಸಬೇಕು. ನಾನು ನಿಮ್ಮನ್ನು ಪ್ರೀತಿಸಿದ ಮೇರೆಗೆ ನೀಉ ಸಹ ಒಬ್ಬರನ್ನೊಬ್ಬರು ಪ್ರೀತಿಸಬೇಕು." ಯೋಹಾನ 13:34

4. "ನಿಮ್ಮೊಳಗೆ ಒಬ್ಬರ ಮೇಲೊಬ್ಬರಿಗೆ ಪ್ರೀತಿ ಇದ್ದರೆ ಎಲ್ಲರೂ ನಿಮ್ಮನ್ನು ನನ್ನ ಶಿಷ್ಯರೆಂದು ತಿಳಿದುಕೊಳ್ಳುವರು." ಯೋಹಾ.13:35

5. "ನೀವು ನನ್ನನ್ನು ಪ್ರೀತಿಸುವರಾದರೆ ನನ್ನ ಆಜ್ಞೆಗಳನ್ನು ಕೈಕೊಂಡು ನಡೆಯುವಿರಿ." ಯೋಹಾ.14:15

6. "ನನ್ನ ಆಜ್ಞೆಗಳನ್ನು ಹೊಂದಿ ಅವುಗಳನ್ನು ಕೈಕೊಂಡು ನಡೆಯುವವನೇ ನನ್ನನ್ನು ಪ್ರೀತಿಸುವವನು. ನನ್ನನ್ನು ಪ್ರೀತಿಸುವವನು ನನ್ನ ತಂದೆಗೆ ಪ್ರಿಯನಾಗಿರುವನು. ನಾನೂ ಅವನನ್ನು ಪ್ರೀತಿಸಿ ಅವನಿಗೆ ಕಾಣಿಸಿಕೊಳ್ಳುವೆನು." ಯೋಹಾ.14:21

7. "ಯಾರಾದರೂ ನನ್ನನ್ನು ಪ್ರೀತಿಸುವವನಾದರೆ ನನ್ನ ಮಾತನ್ನು ಕೈಕೊಂಡು ನಡೆಯುವನು; ಅವನನ್ನು ನನ್ನ

ತಂದೆಯು ಪ್ರೀತಿಸುವನು ಮತ್ತು ನಾವಿಬ್ಬರೂ ಬಂದು ಅವನ ಬಳಿಯಲ್ಲಿ ಬಿಡಾರವನ್ನು ಮಾಡಿಕೊಳ್ಳುವೆವು.'' ಯೋಹಾ.14:23

8. ''ಯೇಸು ತಾನು ಈ ಲೋಕವನ್ನು ಬಿಟ್ಟು, ತಂದೆಯ ಬಳಿಗೆ ಹೋಗಬೇಕಾದ ಕಾಲ ಬಂತೆಂದು ತಿಳುಕೊಂಡು ಲೋಕ ದಲ್ಲಿರುವವರನ್ನು ಪ್ರೀತಿಸಿ ಪರಿಪೂರ್ಣವಾಗಿ ಪ್ರೀತಿಸುತ್ತಾ ಬಂದನು.'' ಯೋಹಾ.13:1

9. ''ನಾನು ನನ್ನ ತಂದೆಯ ಆಜ್ಞೆಗಳನ್ನು ಕೈಕೊಂಡು ನಡೆದು ಆತನ ಪ್ರೀತಿಯಲ್ಲಿ ನೆಲೆಗೊಂಡಿರುವ ಮೇರೆಗೆ ನೀವೂ ನನ್ನ ಆಜ್ಞೆಗಳನ್ನು ಕೈಕೊಂಡು ನಡೆದರೆ ನನ್ನ ಪ್ರೀತಿಯಲ್ಲಿ ನೆಲೆಗೊಂಡಿರುವಿರಿ.'' ಯೋಹಾ.15:10

10. ''ನಿನ್ನ ದೇವರಾಗಿರುವ ಕರ್ತನನ್ನು ನಿನ್ನ ಪೂರ್ಣ ಹೃದಯ ದಿಂದಲೂ ನಿನ್ನ ಪೂರ್ಣ ಪ್ರಾಣದಿಂದಲೂ ನಿನ್ನ ಪೂರ್ಣ ಬುದ್ಧಿಯಿಂದಲೂ ಪ್ರೀತಿಸಬೇಕು.'' ಮತ್ತಾ.22:37

11. ''ನಿನ್ನ ನೆರೆಯವನನ್ನು ಪ್ರೀತಿಸಿ ನಿನ್ನ ವೈರಿಯನ್ನು ಹಗೆ ಮಾಡ ಬೇಕೆಂದು ಹೇಳಿಯದೆ ಎಂಬದಾಗಿ ಕೇಳಿದ್ದೀರಷ್ಟೆ, ಆದರೆ ನಾನು ನಿಮಗೆ ಹೇಳುವದೇನಂದರೆ, ನಿಮ್ಮ ವೈರಿಗಳನ್ನು ಪ್ರೀತಿಸಿ.'' ಮತ್ತಾ.5:43,44

12. ''ನಿಮ್ಮ ವೈರಿಗಳನ್ನು ಪ್ರೀತಿಸಿ ಅವರಿಗೆ ಉಪಕಾರ ಮಾಡಿರಿ. ಧೈರ್ಯವನ್ನು ಬಿಡದೆ ಸಾಲ ಕೊಡಿರಿ. ಹೀಗೆ ಮಾಡಿದರೆ ನಿಮಗೆ ಬಹಳ ಫಲ ಸಿಕ್ಕುವದು.'' ಲೂಕ 6:35

13. ''ನಿಮಗೆ ಪ್ರೀತಿ ತೋರಿಸುವವರನ್ನೇ ನೀವು ಪ್ರೀತಿಸಿದರೆ

ನಿಮಗೆ ಏನು ಹೊಗಳಿಕೆ ಬಂದೀತು.'' ಲೂಕ 6:32

14. ''ನಿನ್ನ ಸಹೋದರನು ತಪ್ಪು ಮಾಡಿದರೆ ನೀನು ಹೋಗಿ ನೀನೂ ಅವನೂ ಇಬ್ಬರೇ ಇರುವಾಗ ಅವನ ತಪ್ಪನ್ನು ಅವನಿಗೆ ತಿಳಿಸು. ಅವನು ನಿನ್ನ ಮಾತನ್ನು ಕೇಳಿದರೆ ನಿನ್ನ ಸಹೋದರನನ್ನು ಸಂಪಾದಿಸಿಕೊಂಡಿರುವಿ.''ಮತ್ತಾ.18:15

15. ''ಪ್ರಾಣವನ್ನೇ ಸ್ನೇಹಿತರಿಗೋಸ್ಕರ ಕೊಡುವ ಪ್ರೀತಿಗಿಂತ ಹೆಚ್ಚಿನ ಪ್ರೀತಿಯು ಯಾವದೂ ಇಲ್ಲ.'' ಯೋಹಾ.15:13

16. ''ದೇವರು ಲೋಕದ ಮೇಲೆ ಎಷ್ಟೋ ಪ್ರೀತಿಯನ್ನಿಟ್ಟು, ತನ್ನ ಒಬ್ಬನೇ ಮಗನನ್ನು ಕೊಟ್ಟನು. ಆತನನ್ನು ನಂಬುವ ಒಬ್ಬನಾದರೂ ನಾಶವಾಗದೆ ಎಲ್ಲರೂ ನಿತ್ಯ ಜೀವವನ್ನು ಪಡೆಯಬೇಕೆಂದು ಆತನನ್ನು ಕೊಟ್ಟನು.'' ಯೋಹಾ.3:16

17. ''ನೀವು ನನ್ನ ಮೇಲೆ ಮಮತೆ ಇಟ್ಟು ನನ್ನನ್ನು ತಂದೆಯ ಬಳಿಯಿಂದ ಹೊರಟು ಬಂದವನೆಂದು ನಂಬಿದ್ದರಿಂದ ತಂದೆಯು ತಾನೇ ನಿಮ್ಮ ಮೇಲೆ ಮಮತೆ ಇಡುತ್ತಾನಲ್ಲವೇ'' ಯೋಹಾ.16:27

18. ''ನಾನು ಅವರಲ್ಲಿಯೂ ನೀನು ನನ್ನಲ್ಲಿಯೂ ಇರಲಾಗಿ ಅವರ ಐಕ್ಯವು ಪೂರ್ಣಸಿದ್ಧಿಗೆ ಬರುವದರಿಂದ ನೀನು ನನ್ನನ್ನು ಕಳುಹಿಸಿಕೊಟ್ಟಿದ್ದೀ ಎಂದೂ, ನೀನು ನನ್ನನ್ನು ಪ್ರೀತಿಸಿದಂತೆ ಅವರನ್ನೂ ಪ್ರೀತಿಸಿದ್ದೀ ಎಂದೂ ಲೋಕಕ್ಕೆ ತಿಳಿದು ಬರುವದು.'' ಯೋಹಾ.17:23

19. ''ತಂದೆಯ ಮೇಲಾಗಲಿ, ತಾಯಿಯ ಮೇಲಾಗಲಿ, ನನ್ನ

ಮೇಲೆ ಇಡುವದಕ್ಕಿಂತ ಹೆಚ್ಚಾದ ಮಮತೆಯನ್ನಿಡುವವನು ನನಗೆ ಯೋಗ್ಯನಲ್ಲ; ಮಗನ ಮೇಲಾಗಲಿ ಮಗಳ ಮೇಲಾಗಲಿ ನನ್ನ ಮೇಲಿಡುವದಕ್ಕಿಂತ ಹೆಚ್ಚಾದ ಮಮತೆಯನ್ನಿಡುವವನು ನನಗೆ ಯೋಗ್ಯನಲ್ಲ.'' ಮತ್ತಾ.10:37

20. ''ಈ ನನ್ನ ಸಹೋದರರಲ್ಲಿ ಕೇವಲ ಅಲ್ಪನಾದವನೊಬ್ಬನಿಗೆ ಏನೇನು ಮಾಡಿದಿರೋ ಅದನ್ನು ನನಗೂ ಮಾಡಿದ ಹಾಗಾಯಿತು.'' ಮತ್ತಾ.25:40

## 2. ಪರಿಶುದ್ಧತೆ.

1. ''ನಿರ್ಮಲಚಿತ್ತರು ಧನ್ಯರು; ಅವರು ದೇವರನ್ನು ನೋಡುವರು.'' ಮತ್ತಾ.5:8
2. ''ನೀವು ಹೀಗೆ ಪ್ರಾರ್ಥನೆ ಮಾಡತಕ್ಕದ್ದು - ಪರಲೋಕದಲ್ಲಿರುವ ನಮ್ಮ ತಂದೆಯೆ ನಿನ್ನ ನಾಮವು ಪರಿಶುದ್ಧವೆಂದು ಎಣಿಸಲ್ಪಡಲಿ.'' ಮತ್ತಾ.6:9
3. ''ಪರಲೋಕದಲ್ಲಿರುವ ನಿಮ್ಮ ತಂದೆಯು ಯಾವ ದೋಷವೂ ಇಲ್ಲದವನಾಗಿರುವಂತೆ ನೀವು ದೋಷವಿಲ್ಲದವರಾಗಿರ್ರಿ.'' ಮತ್ತಾ.5:48
4. ''ಇವರು ನಿಜವಾಗಿ ಪ್ರತಿಷ್ಠಿತರಾಗಬೇಕೆಂದು ಇವರಿಗೋಸ್ಕರ ನಾನು ನನ್ನನ್ನು ಪ್ರತಿಷ್ಠಿಸಿಕೊಳ್ಳುತ್ತೇನೆ.'' ಯೋಹಾ.17:19
5. ''ದೇವರ ವಸ್ತುಗಳನ್ನು (ಪರಿಶುದ್ಧ) ನಾಯಿಗಳಿಗೆ ಹಾಕಬೇಡಿರಿ. ನಿಮ್ಮ ಮುತ್ತುಗಳನ್ನು ಹಂದಿಗಳ ಮುಂದೆ ಚೆಲ್ಲಬೇಡಿರಿ.'' ಮತ್ತಾ.7:6

6. "ಸ್ನಾನ ಮಾಡಿಕೊಂಡವನ ಕಾಲುಗಳನ್ನು ತೊಳೆಯು ವದಲ್ಲದೆ ಬೇರೇನೂ ತೊಳೆಯಬೇಕಾಗಿರುವದಿಲ್ಲ. ಅವನ ಮೈಯೆಲ್ಲಾ ಶುದ್ಧವಾಗಿದೆ. ನೀವೂ ಶುದ್ಧರಾಗಿದ್ದೀರಿ." ಯೋಹಾ.13:10

7. "ನಾನು ನಿಮಗೆ ಹೇಳಿದ ವಾಕ್ಯದ ದೆಸೆಯಿಂದ ಈಗ ಶುದ್ಧರಾಗಿದ್ದೀರಿ." ಯೋಹಾ.15:3

8. "ನಾನು ಲೋಕದವನಲ್ಲದೆ ಇರುವ ಪ್ರಕಾರ ಇವರೂ ಲೋಕದವರಲ್ಲ." ಯೋಹಾ.17:16

9. "ನೀವು ಲೋಕದ ಕಡೆಯವರಲ್ಲದೆ ಇರುವದರಿಂದಲೂ ನಾನು ನಿಮ್ಮನ್ನು ಲೋಕದೊಳಗಿಂದ ಆರಿಸಿ ತೆಗೆದು ಕೊಂಡಿರು ವದರಿಂದಲೂ ಲೋಕವು ನಿಮ್ಮ ಮೇಲೆ ದ್ವೇಷ ಮಾಡುತ್ತದೆ." ಯೋಹಾ.15:19

10. "ಲೋಕವು ನಿಮ್ಮ ಮೇಲೆ ದ್ವೇಷ ಮಾಡುವದಾದರೆ ಅದು ಮೊದಲು ನನ್ನ ಮೇಲೆ ದ್ವೇಷ ಮಾಡಿತೆಂದು ತಿಳಿದು ಕೊಳ್ಳಿರಿ." ಯೋಹಾ.15:18

11. "ಯಾವನಿಗಾದರೂ ನನ್ನ ಹಿಂದೆ ಬರುವದಕ್ಕೆ ಮನಸ್ಸಿದ್ದರೆ ಅವನು ತನ್ನನ್ನು ನಿರಾಕರಿಸಿ ತನ್ನ ಶಿಲುಬೆಯನ್ನು ಹೊತ್ತು ಕೊಂಡು ನನ್ನ ಹಿಂದೆ ಬರಲಿ." ಮಾರ್ಕ 8:34

12. "ತನ್ನ ಪ್ರಾಣವನ್ನು ಉಳಿಸಿಕೊಳ್ಳಬೇಕೆಂದಿರುವವನು ಅದನ್ನು ಕಳಕೊಳ್ಳುವನು." ಮಾರ್ಕ 8:35

13. "ನನ್ನ ನಿಮಿತ್ತವಾಗಿಯೂ ಸುವಾರ್ತೆಯ ನಿಮಿತ್ತವಾಗಿಯೂ

ತನ್ನ ಪ್ರಾಣವನ್ನು ಕಳಕೊಂಡವನು ಅದನ್ನು ಉಳಿಸಿಕೊಳ್ಳುವನು.'' ಮಾರ್ಕ 8:35

14. ''ನಿನ್ನ ಕಣ್ಣು ದೇಹಕ್ಕೆ ದೀಪವಾಗಿದೆ, ನಿನ್ನ ಕಣ್ಣು ನೆಟ್ಟಗಿರುವಾಗ ಅದರಂತೆ ನಿನ್ನ ದೇಹವೆಲ್ಲಾ ನೆಟ್ಟಗಿರುವದು.'' ಲೂಕ 11:34

15. ''ಧರ್ಮಶಾಸ್ತ್ರದಲ್ಲಿ ಗೌರವವಾದದ್ದನ್ನು ಅಂದರೆ ನ್ಯಾಯವನ್ನೂ ಕರುಣೆಯನ್ನೂ ನಂಬಿಕೆಯನ್ನೂ ಬಿಟ್ಟುಬಿಟ್ಟಿರಿ. ಇವುಗಳನ್ನು ಮಾಡಬೇಕಿತ್ತು.'' ಮತ್ತಾ.23:23

16. ''ನೀವು ಸಹ ಹೊರಗೆ ಜನರಿಗೆ ಸತ್ಪುರುಷರಂತೆ ಕಾಣಿಸಿಕೊಳ್ಳುತ್ತೀರಿ ಸರಿ, ಆದರೆ ಒಳಗೆ ಕಪಟದಿಂದಲೂ ಅನ್ಯಾಯದಿಂದಲೂ ತುಂಬಿದವರಾಗಿದ್ದೀರಿ.'' ಮತ್ತಾ.23:28

17. ''ಕುರುಡನಾದ ಫರಿಸಾಯನೇ, ಮೊದಲು ಪಂಚ ಪಾತ್ರೆ ಬಟ್ಟಲುಗಳ ಒಳಭಾಗವನ್ನು ಶುಚಿ ಮಾಡು, ಆಗ ಅವುಗಳ ಹೊರ ಭಾಗವೂ ಶುಚಿಯಾಗುವದು.'' ಮತ್ತಾ.23:26

18. ''ನಾನೇ ಮಾರ್ಗವೂ ಸತ್ಯವೂ ಜೀವವೂ ಆಗಿದ್ದೇನೆ; ನನ್ನ ಮೂಲಕವಾಗಿ ಹೊರತು ಯಾರೂ ತಂದೆಯ ಬಳಿಗೆ ಬರುವದಿಲ್ಲ.'' ಯೋಹಾ.14:6

19. ''ನಾನು ನನ್ನ ತಂದೆಯಲ್ಲಿಯೂ ನೀವು ನನ್ನಲ್ಲಿಯೂ ನಾನು ನಿಮ್ಮಲ್ಲಿಯೂ ಇರುವದನ್ನು ನೀವು ಆ ದಿನದಲ್ಲಿ ತಿಳುಕೊಳ್ಳುವಿರಿ.'' ಯೋಹಾ.14:20

20. ''ಪವಿತ್ರನಾದ ತಂದೆಯೇ, ನಾವು ಒಂದಾಗಿರುವ ಹಾಗೆ

ಇವರೂ ಒಂದಾಗಿರಬೇಕೆಂದು ನೀನು ನನಗೆ ಕೊಟ್ಟ ನಿನ್ನ ಹೆಸರಿನಲ್ಲಿ ಇವರನ್ನು ಕಾಯುತ್ತಾ ಬಂದೆನು.'' ಯೋಹಾನ 17:11

## 3. ನಂಬಿಕೆ

1. ''ಸಾಸಿವೇ ಕಾಳಿನಷ್ಟು ನಂಬಿಕೆ ನಿಮಗೆ ಇರುವದಾದರೆ ನೀವು ಈ ಬೆಟ್ಟಕ್ಕೆ ಇಲ್ಲಿಂದ ಅಲ್ಲಿಗೆ ಹೋಗು ಎಂದು ಹೇಳಿದರೂ ಅದು ಆಗುವದು.'' ಮತ್ತಾ.17:20

2. ''ನೀವು ನಂಬಿಕೊಂಡು ಪ್ರಾರ್ಥನೆಯಲ್ಲಿ ಏನೇನು ಬೇಡಿಕೊಳ್ಳುವಿರೋ ಅದನ್ನೆಲ್ಲಾ ಹೊಂದುವಿರಿ.'' ಮತ್ತಾ.21:22

3. ''ನಿಮಗೆ ನಿಜ ನಿಜವಾಗಿ ಹೇಳುತ್ತೇನೆ. ನನ್ನನ್ನು ನಂಬುವವನು ನಾನು ನಡಿಸುವ ಕ್ರೀಯೆಗಳನ್ನು ತಾನೂ ನಡಿಸುವನು; ಮತ್ತು ಅವುಗಳಿಗಿಂತ ಮಹತ್ತಾದ ಕ್ರಿಯೆಗಳನ್ನು ನಡಿಸುವವನು.'' ಯೋಹಾ.14:12

4. ''ದೇವರು ಮೆಚ್ಚುವ ಕೆಲಸ ಯಾವದೆಂದರೆ ಆತನು ಕಳುಹಿಸಿಕೊಟ್ಟವನನ್ನು ನೀವು ನಂಬುವದೇ.'' ಯೋಹಾ.6:29

5. ''ದೇವರನ್ನು ನಂಬಿರಿ, ನನ್ನನ್ನೂ ನಂಬಿರಿ. ನನ್ನ ತಂದೆಯ ಮನೆಯಲ್ಲಿ ಬಹಳ ಬಿಡಾರಗಳು ಅವೆ.''ಯೋಹಾ.14:1,2

6. ''ನನ್ನನ್ನು ನಂಬುವವನು ನನ್ನನ್ನೇ ನಂಬುವವನಲ್ಲ; ನನ್ನನ್ನು ಕಳುಹಿಸಿಕೊಟ್ಟಾತನನ್ನು ನಂಬುವವನಾಗಿದ್ದಾನೆ.'' ಯೋಹಾ.12:44

7. ''ಆತನ ಮಗನನ್ನು ನಂಬುವವನಿಗೆ ನಿತ್ಯ ಜೀವವುಂಟು; ಮಗನಿಗೆ ಒಳಗಾಗದವನು ಜೀವವನ್ನು ಕಾಣುವದೇ ಇಲ್ಲ.'' ಯೋಹಾ.3:36

8. ''ಆತನನ್ನು ನಂಬುವವನಿಗೆ ತೀರ್ಪು ಆಗುದಿಲ್ಲ; ಆದರೆ ನಂಬದವನಿಗೆ ದೇವರ ಒಬ್ಬನೇ ಮಗನ ಹೆಸರನ್ನು ನಂಬದೆ ಹೋದದರಿಂದ ಆಗಲೇ ತೀರ್ಪು ಆಗಿಹೋಯಿತು.'' ಯೋಹಾ.3:18

9. ''ನಾನೇ ಪುನರುತ್ಥಾನವೂ ಜೀವವೂ ಆಗಿದ್ದೇನೆ. ನನ್ನನ್ನು ನಂಬುವವನು ಸತ್ತರೂ ಬದುಕುವನು.'' ಯೋಹಾ.11:25

10. ''ಬದುಕುತ್ತಾ ನನ್ನನ್ನು ನಂಬುವ ಪ್ರತಿಯೊಬ್ಬನು ಎಂದಿಗೂ ಸಾಯುವದಿಲ್ಲ.'' ಯೋಹಾ.11:26

11. ''ನೀನು ನನ್ನನ್ನು ನೋಡಿದ್ದರಿಂದ ನಂಬಿದ್ದೀ; ನನ್ನನ್ನು ನೋಡದೆ ನಂಬುವವರು ಧನ್ಯರು.'' ಯೋಹಾ.20:29

12. ''ನನ್ನನ್ನು ನಂಬಿದವನ ಹೊಟ್ಟೆಯೊಳಗಿಂದ ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಜೀವಕರವಾದ ನೀರಿನ ಹೊಳೆಗಳು ಹರಿಯುವವು.'' ಯೋಹಾ.7:38

13. ''ಆದಕಾರಣ ನೀವು ಪ್ರಾರ್ಥನೆ ಮಾಡಿ ಏನೇನು ಬೇಡಿ ಕೊಳ್ಳುತ್ತೀರೋ ಅದನ್ನೆಲ್ಲಾ ಹೊಂದಿದ್ದೇವೆಂದು ನಂಬಿರಿ. ಅದು ನಿಮಗೆ ಸಿಕ್ಕುವದು.'' ಮಾರ್ಕ 11:24

14. ''ಕಾಲವು ಪರಿಪೂರ್ಣವಾಯಿತು. ದೇವರ ರಾಜ್ಯವು ಸಮೀಪಿಸಿತು. ದೇವರ ಕಡೆಗೆ ತಿರುಗಿಕೊಂಡು ಸುವಾರ್ತೆ

ಯನ್ನು ನಂಬಿರಿ.'' ಮಾರ್ಕ 1:15

15. ''ನಂಬಿ ದೀಕ್ಷಾಸ್ನಾನ ಮಾಡಿಸಿಕೊಳ್ಳುವವನು ರಕ್ಷಣೆ ಹೊಂದುವನು; ನಂಬದೆ ಹೋಗುವವನು ದಂಡನೆಗೆ ಗುರಿಯಾಗುವನು.'' ಮಾರ್ಕ 16:16

16. ''ನೀನು ನಂಬಿದರೆ ದೇವರ ಮಹಿಮೆಯನ್ನು ಕಾಣುವಿ, ಎಂದು ನಾನು ನಿನಗೆ ಹೇಳಲಿಲ್ಲವೇ?'' ಯೋಹಾ.11:40

17. ''ನಾನು ಅಲ್ಲಿ ಇಲ್ಲದೆ ಇದ್ದದ್ದಕ್ಕೆ ನಿಮ್ಮ ನಿಮಿತ್ತವಾಗಿ ನಂಬುವದಕ್ಕೆ ಮಾರ್ಗವಾಯಿತು.'' ಯೋಹಾ.11:15

18. ''ಮಗನನ್ನು ನೋಡಿ ಆತನನ್ನು ನಂಬುವ ಪ್ರತಿಯೊಬ್ಬನಿಗೆ ನಿತ್ಯಜೀವವು ಸಿಕ್ಕಬೇಕೆಂಬದೇ ನನ್ನ ತಂದೆಯ ಚಿತ್ತವಾಗಿದೆ.'' ಯೋಹಾ.6:40

19. ''ಜೀವ ಕೊಡುವ ರೊಟ್ಟಿ ನಾನೇ, ನನ್ನ ಬಳಿಗೆ ಬರುವವನಿಗೆ ಎಂದಿಗೂ ಹಸಿವೆಯಾಗುವದಿಲ್ಲ. ನನ್ನನ್ನು ನಂಬುವವರಿಗೆ ಎಂದಿಗೂ ನೀರಡಿಕೆಯಾಗುವದಿಲ್ಲ.'' ಯೋಹಾ.6:35

20. ''ನೀವು ಮೋಶೆಯ ಮಾತನ್ನು ನಂಬುವವರಾಗಿದ್ದರೆ ನನ್ನ ಮಾತುಗಳನ್ನು ನಂಬುತ್ತಿದ್ದೀರಿ.'' ಯೋಹಾ.5:46

## 4. ಪ್ರಾರ್ಥನೆಯ ಮಹತ್ವ.

1. ''ನಿಮ್ಮಲ್ಲಿ ಇಬ್ಬರು ತಾವು ಬೇಡಿಕೊಳ್ಳತಕ್ಕ ಯಾವದಾದರೂ ಒಂದು ಕಾರ್ಯದ ವಿಷಯವಾಗಿ ಭೂಲೋಕದಲ್ಲಿ ಒಂದೇ ಮನಸ್ಸುಳ್ಳವರಾಗಿದ್ದರೆ ಅದು ಪರಲೋಕದಲ್ಲಿರುವ ನನ್ನ ತಂದೆಯಿಂದ ಆಗುವದು.'' ಮತ್ತಾ.18:19

2. ''ಇಬ್ಬರು ಮೂವರು ನನ್ನ ಹೆಸರಿನಲ್ಲಿ ಎಲ್ಲಿ ಕೂಡಿ ಬಂದಿರುತ್ತಾರೋ ಅಲ್ಲಿ ಅವರ ನಡುವೆ ನಾನು ಇದ್ದೇನೆ.'' ಮತ್ತಾ.18:20
3. ''ಬೇಡಿಕೊಳ್ಳಿರಿ ನಿಮಗೆ ದೊರೆಯುವದು, ಹುಡುಕಿರಿ ನಿಮಗೆ ಸಿಕ್ಕುವದು; ತಟ್ಟಿರಿ ನಿಮಗೆ ತೆರೆಯುವದು.'' ಮತ್ತಾ.7:7
4. ''ಪರಲೋಕದಲ್ಲಿರುವ ನಿಮ್ಮ ತಂದೆಯು ತನ್ನನ್ನು ಬೇಡಿಕೊಳ್ಳುವವರಿಗೆ ಎಷ್ಟೋ ಹೆಚ್ಚಾಗಿ ಒಳ್ಳೆಯ ವರಗಳನ್ನು ಕೊಡುವನಲ್ಲವೇ.'' ಮತ್ತಾ.7:11
5. ''ನೀವು ಪ್ರಾರ್ಥನೆ ಮಾಡಿ ಏನೇನು ಬೇಡಿಕೊಳ್ಳುತ್ತೀರೋ ಅದನ್ನೆಲ್ಲಾ ಹೊಂದಿದ್ದೇವೆಂದು ನಂಬಿರಿ; ಅದು ನಿಮಗೆ ಸಿಕ್ಕುವದು.'' ಮಾರ್ಕ 11:24
6. ''ದೇವರು ಆತ್ಮಸ್ವರೂಪನು; ಆತನನ್ನು ಆರಾಧಿಸುವವರು ಆತ್ಮೀಯ ರೀತಿಯಲ್ಲಿ ಸತ್ಯಕ್ಕೆ ತಕ್ಕ ಹಾಗೆ ಆರಾಧಿಸಬೇಕು.'' ಯೋಹಾ.4:24
7. ''ನೀವು ನನ್ನ ಹೆಸರಿನಲ್ಲಿ ನನ್ನನ್ನು ಏನಾದರೂ ಬೇಡಿಕೊಂಡರೆ ಅದನ್ನು ನೆರವೇರಿಸುವೆನು.'' ಯೋಹಾ.14:13
8. ''ನೀವು ನನ್ನಲ್ಲಿಯೂ ನನ್ನ ವಾಕ್ಯಗಳು ನಿಮ್ಮಲ್ಲಿಯೂ ನೆಲೆಗೊಂಡಿದ್ದರೆ ಏನು ಬೇಕಾದರೂ ಬೇಡಿಕೊಳ್ಳಿರಿ, ಅದು ನಿಮಗೆ ದೊರೆಯುವದು.'' ಯೋಹಾ.15:7
9. ''ನಿಮಗೆ ನಿಜನಿಜವಾಗಿ ಹೇಳುತ್ತೇನೆ, ನೀವು ತಂದೆಯನ್ನು ಏನಾದರೂ ಬೇಡಿಕೊಂಡರೆ ಅದನ್ನು ಆತನು ನನ್ನ ಹೆಸರಿನ

ಮೇಲೆ ನಿಮಗೆ ಕೊಡುವನು.'' ಯೋಹಾ.16:23

10. ''ನೀವು ಇದುವರೆಗೆ ನನ್ನ ಹೆಸರಿನ ಮೇಲೆ ಯಾವದೊಂದನ್ನೂ ಬೇಡಿಕೊಂಡಿಲ್ಲ; ಬೇಡಿಕೊಳ್ಳಿರಿ, ನಿಮಗೆ ಸಿಕ್ಕುವದು, ಆಗ ನಿಮ್ಮ ಆನಂದವು ಪರಿಪೂರ್ಣವಾಗುವದು,'' ಯೋಹಾ.16:24

11. ''ನೀನು ಪ್ರಾರ್ಥನೆ ಮಾಡಬೇಕಾದರೆ ನಿನ್ನ ಏಕಾಂತವಾದ ಕೋಣೆಯೊಳಗೆ ಹೋಗಿ ಬಾಗಿಲನ್ನು ಮುಚ್ಚಿಕೊಂಡು ಅಂತರಂಗದಲ್ಲಿಯೂ ಇರುವ ನಿನ್ನ ತಂದೆಗೆ ಪ್ರಾರ್ಥನೆ ಮಾಡು.'' ಮತ್ತಾ.6:6

12. ''ಪ್ರಾರ್ಥನೆ ಮಾಡುವಾಗ ಅಜ್ಞಾನಿಗಳ ಹಾಗೆ ಹೇಳಿದ್ದನ್ನೇ ಸುಮ್ಮಸುಮ್ಮನೆ ಹೇಳಬೇಡ. ಅವರು ಬಹಳ ಮಾತು ಗಳನ್ನಾಡಿದರೆ ತಮ್ಮ ಪ್ರಾರ್ಥನೆಯನ್ನು ದೇವರು ಕೇಳುತ್ತಾನೆಂದು ನೆನಸುತ್ತಾರೆ.'' ಮತ್ತಾ.6:7

13. ''ನೀವು ನಿಮ್ಮ ತಂದೆಯನ್ನು ಬೇಡಿಕೊಳ್ಳುವದಕ್ಕಿಂತ ಮುಂಚೆಯೇ ನಿಮಗೆ ಏನೇನು ಅಗತ್ಯವೆಂಬದು ಆತನಿಗೆ ತಿಳಿದದೆ.'' ಮತ್ತಾ.6:8

14. ''ನೀವು ಹೀಗೆ ಪ್ರಾರ್ಥನೆ ಮಾಡತಕ್ಕದ್ದು - ಪರಲೋಕ ದಲ್ಲಿರುವ ನಮ್ಮ ತಂದೆಯೇ ನಿನ್ನ ನಾಮವು ಪರಿಶುದ್ಧವೆಂದು ಎಣಿಸಲ್ಪಡಲಿ.'' ಮತ್ತಾ.6:9,10

15. ''ತಂದೆಯೇ ನೀನು ನನ್ನ ಪ್ರಾರ್ಥನೆಯನ್ನು ಕೇಳಿದ್ದಕ್ಕೆ ನಿನ್ನನ್ನು ಕೊಂಡಾಡುತ್ತೇನೆ. ನೀನು ಯಾವಾಗಲೂ ನನ್ನ ಪ್ರಾರ್ಥನೆಯನ್ನು ಕೇಳುವವನಾಗಿದ್ದೀ.'' ಯೋಹಾ.11:41

16. ''ತಂದೆಯೇ ಕಾಲ ಬಂದದೆ; ನಿನ್ನ ಮಗನನ್ನು ಮಹಿಮೆ ಪಡಿಸು. ಆಗ ಮಗನು ನಿನ್ನನ್ನು ಮಹಿಮೆ ಪಡಿಸುವನು.'' ಯೋಹಾ.17:1

17. ''ನಮ್ಮನ್ನು ಶೋಧನೆಯೊಳಗೆ ಸೇರಿಸದೆ ಕೇಡಿನಿಂದ ನಮ್ಮನ್ನು ತಪ್ಪಿಸು.'' ಮತ್ತಾ.6:13

18. ''ಶೋಧನೆಗೆ ಒಳಗಾಗದಂತೆ ಎಚ್ಚರವಾಗಿದ್ದು ಪ್ರಾರ್ಥಿಸಿರಿ; ಮನಸ್ಸು ಸಿದ್ಧವಾಗಿದೆ ಸರಿ, ಆದರೆ ದೇಹಕ್ಕೆ ಬಲ ಸಾಲದು.'' ಮತ್ತಾ.26:41

19. ''ನೀತಿಸ್ವರೂಪನಾದ ತಂದೆಯೇ, ಲೋಕವಂತೂ ನಿನ್ನನ್ನು ತಿಳಿಯಲಿಲ್ಲ. ಆದರೆ ನಾನು ನಿನ್ನನ್ನು ತಿಳಿದಿದ್ದೇನೆ ಮತ್ತು ಇವರು ನೀನೇ ನನ್ನನ್ನು ಕಳುಹಿಸಿಕೊಟ್ಟಿದ್ದಿ ಎಂದು ತಿಳಿದಿದ್ದಾರೆ.'' ಯೋಹಾ.17:25

20. ''ಲೋಕದೊಳಗಿಂದ ತೆಗೆದುಕೊಂಡು ಹೋಗಬೇಕೆಂದು ನಾನು ಕೇಳಿಕೊಳ್ಳುವದಿಲ್ಲ; ಕೆಡುಕನಿಂದ ತಪ್ಪಿಸಿ ಕಾಪಾಡಬೇಕೆಂದು ಕೇಳಿಕೊಳ್ಳುತ್ತೇನೆ.'' ಯೋಹಾನ 17:15

## 5. ಪವಿತ್ರಾತ್ಮ.

1. ''ನನ್ನ ಹೆಸರಿನಲ್ಲಿ ತಂದೆಯು ಕಳುಹಿಸಿ ಕೊಡುವ ಪವಿತ್ರಾತ್ಮನೇ ನಿಮಗೆ ಎಲ್ಲವನ್ನು ಉಪದೇಶಿಸಿ ನಾನು ನಿಮಗೆ ಹೇಳಿದ್ದನ್ನೆಲ್ಲಾ ನಿಮ್ಮ ನೆನಪಿಗೆ ತರುವನು.'' ಯೋಹಾ.14:26

2. ''ತಂದೆಯ ಬಳಿಯಿಂದ ನಾನು ನಿಮಗೆ ಕಳುಹಿಸಿ ಕೊಡುವ

ಸಹಾಯಕನು ಅಂದರೆ ತಂದೆಯ ಬಳಿಯಿಂದ ಹೊರಡುವ ಸತ್ಯದ ಆತ್ಮನು, ಬಂದಾಗ ಆತನು ನನ್ನನ್ನು ಕುರಿತು ಸಾಕ್ಷಿ ಹೇಳುವನು.'' ಯೋಹಾ.15:26

3. ''ನಾನು ಹೋಗದಿದ್ದರೆ ಆ ಸಹಾಯಕನು ನಿಮ್ಮ ಬಳಿಗೆ ಬರುವದಿಲ್ಲ; ನಾನು ಹೋದರೆ ಆತನನ್ನು ನಿಮ್ಮ ಬಳಿಗೆ ಕಳುಹಿಸಿ ಕೊಡುತ್ತೇನೆ.'' ಯೋಹಾ.16:7

4. ''ಆತನು ಬಂದು ಪಾಪ ನೀತಿ ನ್ಯಾಯತೀರ್ವಿಕೆ ಈ ವಿಷಯ ಗಳಲ್ಲಿ ಲೋಕಕ್ಕೆ ಅರುಹನ್ನು ಹುಟ್ಟಿಸುವನು.'' ಯೋಹಾ.16:8

5. ''ಹೇಗೆ ಮಾತನಾಡಬೇಕು ಏನು ಹೇಳಬೇಕು ಎಂದು ಚಿಂತೆ ಮಾಡಬೇಡಿರಿ; ಆಡತಕ್ಕ ಮಾತು ಆ ಗಳಿಗೆಯಲ್ಲಿ ನಿಮಗೆ ಸೂಚನೆಯಾಗುವದು.'' ಮತ್ತಾ.10:19

6. ''ಮಾತಾಡುವವರು ನೀವಲ್ಲ ನಿಮ್ಮ ತಂದೆಯ ಆತ್ಮನೇ. ನಿಮ್ಮ ಮುಖಾಂತರವಾಗಿ ಮಾತಾಡುವನು.'' ಮತ್ತಾ.10:20

7. ''ನೀವು ಹೇಳತಕ್ಕದ್ದನ್ನು ಪವಿತ್ರಾತ್ಮನು ಆ ಗಳಿಗೆಯಲ್ಲಿ ನಿಮಗೆ ಕಲಿಸಿಕೊಡುವನು ಅಂದನು.'' ಲೂಕ 12:12

8. ''ನಿಮ್ಮ ತಂದೆಯು ತನ್ನನ್ನು ಬೇಡಿಕೊಳ್ಳುವವರಿಗೆ ಎಷ್ಟೋ ಹೆಚ್ಚಾಗಿ ಪವಿತ್ರಾತ್ಮ ವರವನ್ನು ಕೊಡುವನಲ್ಲವೇ.'' ಲೂಕ.11:13

9. ''ಗಾಳಿಯು ಮನಸ್ಸು ಬಂದ ಕಡೆ ಬೀಸುತ್ತದೆ; ಅದರ ಸಪ್ಪಳ

ವನ್ನು ಕೇಳುತ್ತೀ; ಆದರೆ ಅದು ಎಲ್ಲಿಂದ ಬರುತ್ತದೋ ಎಲ್ಲಿಗೆ ಹೋಗುತ್ತದೋ ನಿನಗೆ ತಿಳಿಯದು. ಆತ್ಮನಿಂದ ಹುಟ್ಟಿದವರೆಲ್ಲರೂ ಅದರಂತೆಯೇ.'' ಯೋಹಾ.3:8

10. ''ಬದುಕಿಸುವಂಥದ್ದು ಆತ್ಮವೇ; ಮಾಂಸವು ಯಾವದಕ್ಕೂ ಬರುವದಿಲ್ಲ.'' ಯೋಹಾ.6:63

11. ''ಆತನು ನಿಮಗೆ ಬೇರೊಬ್ಬ ಸಹಾಯಕನನ್ನು ಸದಾಕಾಲ ನಿಮ್ಮ ಸಂಗಡ ಇರುವದಕ್ಕೆ ಕೊಡುವನು.'' ಯೋಹಾ.14:16

12. ''ನೀವು ಆತನನ್ನು ಬಲ್ಲಿರಿ; ಹೇಗೆಂದರೆ ನಿಮ್ಮ ಬಳಿಯಲ್ಲಿ ವಾಸ ಮಾಡುತ್ತಾನೆ ಮತ್ತು ನಿಮ್ಮೊಳಗೆ ಇರುವನು.'' ಯೋಹಾ.14:17

13. ''ಅವರು ನನ್ನನ್ನು ನಂಬದೆ ಇರುವದರಿಂದ ಪಾಪದ ವಿಷಯವಾಗಿಯೂ, ನಾನು ತಂದೆಯ ಬಳಿಗೆ ಹೋಗಿ ಇನ್ನು ಮೇಲೆ ನಿಮಗೆ ಕಾಣಿಸದೆ ಇರುವದರಿಂದ ನೀತಿಯ ವಿಷಯದಲ್ಲಿಯೂ ಇಹಲೋಕಾಧಿಪತಿಗೆ ನ್ಯಾಯತೀರ್ವಿಕೆಯಾದದ್ದರಿಂದ ನ್ಯಾಯತೀರ್ವಿಕೆಯ ವಿಷಯದಲ್ಲಿಯೂ ಲೋಕಕ್ಕೆ ಅರುಹನ್ನು ಹುಟ್ಟಿಸುವನು.'' ಯೋಹಾ.16:9-11

14. ''ಸತ್ಯದ ಆತ್ಮನು ಬಂದಾಗ ಆತನು ನಿಮ್ಮನ್ನು ನಡಿಸಿಕೊಂಡು ಹೋಗಿ ಸಕಲ ವಿಷಯದಲ್ಲಿಯೂ ಸತ್ಯಕ್ಕೆ ಸೇರಿಸುವನು.'' ಯೋಹಾ.16:13

15. ''ಆತನು ತನ್ನಷ್ಟಕ್ಕೆ ತಾನೇ ಮಾತಾಡದೆ ಕೇಳಿದ

ಮಾತುಗಳನ್ನೇ ಆಡುವನು ಮತ್ತು ಮುಂದಾಗುವ ಸಂಗತಿಗಳನ್ನು ನಿಮಗೆ ತಿಳಿಸುವನು." ಯೋಹಾ.18:13

16. "ಆತನು ನನ್ನದರೊಳಗಿಂದ ತೆಗೆದುಕೊಂಡು ನಿಮಗೆ ತಿಳಿಸುತ್ತಾ ನನ್ನನ್ನೇ ಮಹಿಮೆ ಪಡಿಸುವನು." ಯೋಹಾ.16:14

17. "ಮನುಷ್ಯರು ಮಾಡುವ ಪ್ರತಿಯೊಂದು ಪಾಪಕ್ಕೂ ದೂಷಣೆಗೂ ಕ್ಷಮಾಪಣೆ ಉಂಟಾಗುವದು. ಆದರೆ ಪವಿತ್ರಾತ್ಮ ದೂಷಣೆಗೆ ಕ್ಷಮಾಪಣೆ ಇಲ್ಲ." ಮತ್ತಾ.12:31

18. "ನನ್ನ ನ್ನು ನಂಬಿದವನ ಹೊಟ್ಟೆಯೊಳಗಿಂದ ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಜೀವಕರವಾದ ನೀರಿನ ಹೊಳೆಗಳು ಹರಿಯುವವು." ಯೋಹಾ.7:38

19. "ಯೇಸು ತನ್ನನ್ನು ನಂಬಿದವರು ಹೊಂದಲಿರುವ ಪವಿತ್ರಾತ್ಮ ವರವನ್ನು ಕುರಿತು ಹೇಳಿದನು." ಯೋಹಾ.7:39.

20. "ಇಗೋ, ನನ್ನ ತಂದೆಯು ನಿಮಗೆ ವಾಗ್ದಾನ ಮಾಡಿದ್ದನ್ನು ನಿಮಗೆ ಕಳುಹಿಸಿ ಕೊಡುತ್ತೇನೆ. ದೇವರು ಮೇಲಣ ಲೋಕ ದಿಂದ ನಿಮಗೆ ಶಕ್ತಿಯನ್ನು ಹೊದಿಸುವ ತನಕ ಈ ಪಟ್ಟಣ ದಲ್ಲೇ ಕಾದುಕೊಂಡಿರ್ರಿ." ಲೂಕ 24:40

## 6. ಕ್ರಿಸ್ತನ ವಿಜ್ಞಾಪನಾ ಬೇಡಿಕೆ.

1. "ನೀನು ನನಗೆ ಕೊಟ್ಟ ಮಾತುಗಳನ್ನು ನಾನು ಇವರಿಗೆ

ಕೊಟ್ಟಿದ್ದೇನೆ; ಇವರು ಆ ಮಾತುಗಳನ್ನು ಕೈಕೊಂಡು ನನ್ನನ್ನು ನಿನ್ನ ಬಳಿಯಿಂದ ಹೊರಟು ಬಂದವನೆಂದು ನಿಜವಾಗಿ ತಿಳಿದು ನೀನೇ ನನ್ನನ್ನು ಕಳುಹಿಸಿ ಕೊಟ್ಟಿರುವದಾಗಿ ನಂಬಿದ್ದಾರೆ.'' ಯೋಹಾ.17:8

2. ''ನಾನು ಇವರಿಗೋಸ್ಕರ ಕೇಳಿಕೊಳ್ಳುತ್ತೇನೆ. ಲೋಕಕ್ಕೋಸ್ಕರ ಕೇಳಿಕೊಳ್ಳದೆ ನೀನು ನನಗೆ ಕೊಟ್ಟವರಿಗೋಸ್ಕರವೇ ಕೇಳಿ ಕೊಳ್ಳುತ್ತೇನೆ.'' ಯೋಹಾ.17:9

3. ''ಪವಿತ್ರನಾದ ತಂದೆಯೇ, ನಾವು ಒಂದಾಗಿರುವ ಹಾಗೆ ಇವರೂ ಒಂದಾಗಿರಬೇಕೆಂದು, ನೀನು ನನಗೆ ಕೊಟ್ಟ ನಿನ್ನ ಹೆಸರಿನಲ್ಲಿ ಇವರನ್ನು ಕಾಯಬೇಕು.'' ಯೋಹಾ.17:11

4. ''ಇವರು ನಿಜವಾಗಿ ಪ್ರತಿಷ್ಠಿತರಾಗಬೇಕೆಂದು ಇವರಿಗೋಸ್ಕರ ನಾನು ನನ್ನನ್ನು ಪ್ರತಿಷ್ಠೆ ಮಾಡಿಕೊಳ್ಳುತ್ತೇನೆ.'' ಯೋಹಾ.19:19

5. ''ತಂದೆಯೇ ನೀನು ನನಗೆ ಯಾರನ್ನು ಕೊಟ್ಟಿಯೋ ಅವರು ನಾನಿರುವ ಸ್ಥಳದಲ್ಲಿ ನನ್ನ ಕೂಡ ಇರಬೇಕು.'' ಯೋಹಾ.17:24

6. ''ಇವರಿಗೋಸ್ಕರ ಮಾತ್ರವಲ್ಲದೆ ಇವರ ವಾಕ್ಯದಿಂದ ನನ್ನನ್ನು ನಂಬುವವರಿಗೋಸ್ಕರ ಸಹ ಕೇಳಿಕೊಳ್ಳುತ್ತೇನೆ.'' ಯೋಹಾ.17:20

7. ''ನಾನು ಲೋಕದವನಲ್ಲದೆ ಇರುವ ಪ್ರಕಾರ ಇವರೂ ಲೋಕ ದವರಲ್ಲ. ಆದಕಾರಣ ಲೊಕವು ಇವರ ಮೇಲೆ ದ್ವೇಷ

ಮಾಡಿ ಅದೆ'' ಯೋಹಾ.17:16

8. ''ನಾನು ಅವರಿಗೆ ನಿನ್ನ ಹೆಸರನ್ನು ತಿಳಿದ್ದೇನೆ; ಇನ್ನೂ ತಿಳಿಸು ವೆನು.'' ಯೋಹಾ.17:26

9. ''ಮಾಡಬೇಕೆಂದು ನೀನು ನನಗೆ ಕೊಟ್ಟ ಕೆಲಸವನ್ನು ನಾನು ನೆರವೇರಿಸಿ ನಿನ್ನನ್ನು ಭೂಲೋಕದಲ್ಲಿ ಮಹಿಮೆಪಡಿಸಿದೆನು.'' ಯೋಹಾ.17:4

10. ''ನೀನು ನನ್ನನ್ನು ಕಳುಹಿಸಿಕೊಟ್ಟಿದ್ದೀ ಎಂದು ಲೋಕವು ನಂಬುವದಕ್ಕಾಗಿ ಅವರೆಲ್ಲರು ಒಂದಾಗಿರಬೇಕು.'' ಯೋಹಾ.17:21

11. ''ನೀನು ನನ್ನಲ್ಲಿಯೂ ನಾನು ನಿನ್ನಲ್ಲಿಯೂ ಇರುವ ಪ್ರಕಾರ ಅವರೂ ನಮ್ಮಲ್ಲಿ ಇರಬೇಕೆಂದು ಕೇಳಿಕೊಳ್ಳುತ್ತೇನೆ.'' ಯೋಹಾ.17:21.

12. ''ಈಗ ನಿನ್ನ ಬಳಿಗೆ ಬರುವವನಾಗಿದ್ದೇನೆ. ಆದುದರಿಂದ ಇವರಲ್ಲಿ ನನ್ನ ಆನಂದವು ಪರಿಪೂರ್ಣವಾಗಿರುವಂತೆ ಲೋಕದಲ್ಲಿದ್ದು ಈ ಮಾತುಗಳನ್ನು ಆಡುತ್ತೇನೆ.'' ಯೋಹಾ.17:13

13. ''ನಾನು ಇವರ ಸಂಗಡ ಇದ್ದಾಗ ನೀನು ನನಗೆ ಕೊಟ್ಟಿರುವ ನಿನ್ನ ಹೆಸರಿನಲ್ಲಿ ಇವರನ್ನು ಕಾಯುತ್ತಾ ಬಂದೆನು, ಇವರನ್ನು ಕಾಪಾಡಿದೆನು.'' ಯೋಹಾ.17:12

14. ''ನನ್ನದೆಲ್ಲಾ ನಿನ್ನದೇ ನಿನ್ನದೆಲ್ಲಾ ನನ್ನದೇ, ಮತ್ತು ಇವರಿಂದ ನನಗೆ ಮಹಿಮೆ ಉಂಟಾಗಿದೆ.''ಯೋಹಾ.17:10

15. "ನೀನು ನನ್ನನ್ನು ಲೋಕಕ್ಕೆ ಕಳುಹಿಸಿ ಕೊಟ್ಟಂತೆ ನಾನೂ ಇವರನ್ನು ಲೋಕಕ್ಕೆ ಕಳುಹಿಸಿಕೊಟ್ಟೆನು." ಯೋಹಾ.17:18

16. "ಲೋಕವು ಹುಟ್ಟುವದಕ್ಕಿಂತ ಮುಂಚೆಯೇ ನೀನು ನನ್ನನ್ನು ಪ್ರೀತಿಸಿ ನನಗೆ ಕೊಟ್ಟಿರುವ ಮಹಿಮೆಯನ್ನು ನೋಡ ಬೇಕೆಂದು ಇಚ್ಛೈಸುತ್ತೇನೆ." ಯೋಹಾ.17:24

18. "ಇವರನ್ನು ಲೋಕದೊಳಗಿಂದ ತೆಗೆದುಕೊಂಡು ಹೋಗ ಬೇಕೆಂದು ನಾನು ಕೇಳಿಕೊಳ್ಳುವದಿಲ್ಲ, ಕೆಡುಕರಿಂದ ತಪ್ಪಿಸಿ ಕಾಪಾಡಬೇಕೆಂದು ಕೇಳಿಕೊಳ್ಳುತ್ತೇನೆ." 15ನೇ ವಚನ

19. "ನಾವು ಒಂದಾಗಿರುವ ಪ್ರಕಾರ ಅವರು ಒಂದಾಗಿರಬೇಕೆಂದು ನೀನು ನನಗೆ ಕೊಟ್ಟಿರುವ ಮಹಿಮೆಯನ್ನು ನಾನು ಅವರಿಗೆ ಕೊಟ್ಟಿದ್ದೇನೆ."

23ನೇ ವಾಕ್ಯ

20. "ನೀತಿ ಸ್ವರೂಪನಾದ ತಂದೆಯೇ, ಲೋಕವಂತೂ ನಿನ್ನನ್ನು ತಿಳಿಯಲಿಲ್ಲ, ಆದರೆ ನಾನು ನಿನ್ನನ್ನು ತಿಳಿದಿದ್ದೇನೆ." 25ನೇ ವಚನ

## 7. ಒಳ್ಳೇ ಕುರುಬನು.

1. "ಅನ್ಯ ಜನರ ಕಡೆಗೆ ಹೋಗಬೇಡಿರಿ. ಸಮಾರ್ಯದ ಊರೊಳಗೆ ಕಾಲಿಡಬೇಡಿರಿ. ಇವರನ್ನು ಬಿಟ್ಟು, ತಪ್ಪಿಸಿ ಕೊಂಡ ಕುರಿಗಳಂತಿರುವ ಇಸ್ರಾಯೇಲಿನ ಮನೆತನದವರ ಬಳಿಗೆ ಹೋಗಿರಿ." ಮತ್ತಾ.10:5,6

2. ''ನಿಮ್ಮೊಳಗೆ ಯಾವ ಮನುಷ್ಯನಾದರೂ ತನಗೆ ನೂರು ಕುರಿಗಳಿರಲಾಗಿ ಅವುಗಳಲ್ಲಿ ಒಂದು ಕಳೆದು ಹೋದರೆ ಅವನು ತೊಂಭತ್ತೊಂಭತ್ತನ್ನು ಅಡವಿಯಲ್ಲಿ ಬಿಟ್ಟು ಕಳೆದು ಹೋದದ್ದನ್ನು ಸಿಕ್ಕುವ ತನಕ ಹುಡುಕಿಕೊಂಡು ಹೋಗದೆ ಇದ್ದಾನೇ?'' ಲೂಕ 15:4

3. ''ನೋಡಿರಿ, ತೋಳಗಳ ನಡುವೆ ಕುರಿಗಳನ್ನು ಹೊಗಿಸಿದಂತೆ ನಾನು ನಿಮ್ಮನ್ನು ಕಳುಹಿಸಿಕೊಡುತ್ತೇನೆ.'' ಮತ್ತಾ.10:16

4. ''ಜನರ ಗುಂಪನ್ನು ನೋಡಿ ಅವರು ಕುರುಬನಿಲ್ಲದ ಕುರಿಗಳ ಹಾಗೆ ತೊಳಲಿ ಬಳಲಿ ಹೋಗಿದ್ದಾರಲ್ಲಾ ಎಂದು ಅವರ ಮೇಲೆ ಕನಿಕರಪಟ್ಟನು.'' ಮತ್ತಾ.9:36

5. ''ನಾನೇ ಒಳ್ಳೇ ಕುರುಬನು; ಒಳ್ಳೇ ಕುರುಬನು ತನ್ನ ಕುರಿಗಳಿಗೋಸ್ಕರ ತನ್ನ ಪ್ರಾಣವನ್ನು ಕೊಡುತ್ತಾನೆ.'' ಯೋಹಾ.10:11

6. ''ಬಾಗಿಲಿನಿಂದ ಒಳಗೆ ಬರುವವನು ಆ ಕುರಿಗಳ ಕುರುಬನು.'' ಯೋಹಾ.10:2

7. ''ಕುರಿಗಳಿಗೆ ನಾನೇ ಬಾಗಿಲಾಗಿದ್ದೇನೆ.'' ಯೋಹಾ.10:7

8. ''ಅವುಗಳಿಗೆ ಜೀವವು ಇರಬೇಕೆಂತಲೂ ಸಮೃದ್ಧಿಯು ಇರಬೇಕೆಂತಲೂ ಬಂದೆನು.'' ಯೋಹಾ.10:10

9 ''ಕುರೀ ಹಟ್ಟಿಯೊಳಗೆ ಬಾಗಿಲಿಂದ ಬಾರದೆ ಮತ್ತೆಲ್ಲಿಂದಾದರೂ ಹತ್ತಿ ಬರುವವನು ಕಳ್ಳನೂ ಸುಲುಕೊಳ್ಳುವವನೂ ಆಗಿದ್ದಾನೆ.'' ಯೋಹಾ.10:1

10. ''ಕುರಿಗಳು ಅವನ ಸ್ವರಕ್ಕೆ ಕಿವಿಗೊಡುತ್ತವೆ. ಅವನು ಸ್ವಂತ ಕುರಿಗಳನ್ನು ಹೆಸರು ಹೇಳಿ ಕರೆದು ಹೊರಗೆ ಬಿಡುತ್ತಾನೆ.'' ಯೋಹಾ.10:3,4

11. ''ಸ್ವಂತ ಕುರಿಗಳನ್ನೆಲ್ಲಾ ಹೊರಗೆ ಬಿಟ್ಟ ಮೇಲೆ ತಾನೂ ಅವುಗಳ ಮುಂದೆ ಹೋಗುತ್ತಾನೆ; ಕುರಿಗಳು ಅವನ ಸ್ವರವನ್ನು ತಿಳುಕೊಂಡು ಅವನ ಹಿಂದೆ ಹೋಗುತ್ತವೆ.'' ಯೋಹಾ.10:4

12. ''ಅವು ಅನ್ಯರ ಸ್ವರವನ್ನು ತಿಳಿಯುವದಿಲ್ಲ; ಅನ್ಯನ ಹಿಂದೆ ಹೋಗದೆ ಅವನ ಬಳಿಯಿಂದ ಓಡಿ ಹೋಗುತ್ತದೆ.'' ಯೋಹಾ.10:5

13. '' ನನಗಿಂತ ಮುಂಚೆ ಬಂದವರೆಲ್ಲರೂ ಕಳ್ಳರೂ ಸುಲುಕೊಳ್ಳುವವರೂ ಆಗಿದ್ದಾರೆ; ಆದರೆ ಕುರಿಗಳು ಅವರಿಗೆ ಕಿವಿಗೊಡಲಿಲ್ಲ.'' ಯೋಹಾ.10:8

14. ''ನಾನೇ ಆ ಬಾಗಿಲು; ನನ್ನ ಮುಖಾಂತರವಾಗಿ ಯಾವನಾದರೂ ಒಳಗೆ ಹೋದರೆ ಸುರಕ್ಷಿತವಾಗಿದ್ದು ಒಳಗೆ ಹೋಗುವನು ಹೊರಗೆ ಬರುವನು.'' ಯೋಹಾ.10:9

15. ''ಕಳ್ಳನು ಕದ್ದುಕೊಳ್ಳುವದಕ್ಕೂ ಕೊಯ್ಯುವದಕ್ಕೂ ಹಾಳು ಮಾಡುವದಕ್ಕೂ ಬರುತ್ತಾನೆ ಹೊರತು ಮತ್ತಾವದಕ್ಕೂ ಬರುವದಿಲ್ಲ.'' ಯೋಹಾ.10:10

16. ''ನಾನೇ ಒಳ್ಳೇ ಕುರುಬನು; ತಂದೆಯು ನನ್ನನ್ನು ತಿಳಿದಿರುವಂತೆಯೇ ನಾನು ನನ್ನ ಕುರಿಗಳನ್ನು

ತಿಳಿದಿದ್ದೇನೆ.'' ಯೋಹಾ.10:14,15

17. ''ಕೂಲಿಯಾಳು ಕುರುಬನೂ ಕುರಿಗಳ ಒಡೆಯನೂ ಆಗಿರದೆ ತೋಳ ಬರುವದನ್ನು ಕಾಣುತ್ತಲೇ ಕುರಿಗಳನ್ನು ಬಿಟ್ಟು ಓಡಿ ಹೋಗುತ್ತಾನೆ.'' ಯೋಹಾ.10:12

18. ''ಅವನು ಕೂಲಿಯಾಳು; ಕುರಿಗಳ ಚಿಂತೆ ಅವನಿಗಿಲ್ಲ. ನಾನೇ ಒಳ್ಳೇ ಕುರುಬನು.'' ಯೋಹಾ.10:13

19. ''ನನ್ನ ಕುರಿಗಳು ನನ್ನ ಸ್ವರಕ್ಕೆ ಕಿವಿಗೊಡುತ್ತವೆ. ನಾನು ಅವುಗಳನ್ನು ಬಲ್ಲೆನು; ಅವು ನನ್ನ ಹಿಂದೆ ಬರುತ್ತವೆ.'' ಯೋಹಾ.10:27

20. ''ನಾನು ಅವುಗಳಿಗೆ ನಿತ್ಯ ಜೀವವನ್ನು ಕೊಡುತ್ತೇನೆ; ಅವು ಎಂದಿಗೂ ನಾಶವಾಗುವದೇ ಇಲ್ಲ. ಅವುಗಳನ್ನು ಯಾರೂ ನನ್ನ ಕೈಯೊಳಗಿಂದ ಕಸಕೊಳ್ಳರು.'' ಯೋಹಾ.10:28

## 8. ಧನ್ಯರು. (ಭಾಗ್ಯವಂತರು)

1. ''ಆತ್ಮದಲ್ಲಿ ಬಡವರಾಗಿರುವವರು ಧನ್ಯರು; ಪರಲೋಕ ರಾಜ್ಯವು ಅವರದು.'' ಮತ್ತಾ.5:3

2. ''ದುಃಖ ಪಡುವವರು ಧನ್ಯರು; ಅವರು ಸಮಾಧಾನ ಹೊಂದುವರು.'' ಮತ್ತಾ.5:4

3. ''ಶಾಂತರು ಧನ್ಯರು; ಅವರು ಭೂಮಿಗೆ ಬಾಧ್ಯರಾಗುವರು.'' ಮತ್ತಾ.5:5

4. "ನೀತಿಗೆ ಹಸಿದು ಬಾಯರಿದವರು ಧನ್ಯರು; ಅವರಿಗೆ ತೃಪ್ತಿಯಾಗುವದು." ಮತ್ತಾ.5:6
5. "ನಿರ್ಮಲ ಚಿತ್ತರು ಧನ್ಯರು ಅವರು ದೇವರನ್ನು ನೋಡುವರು." ಮತ್ತಾ.5:8
6. "ಕರುಣೆಯುಳ್ಳವರು ಧನ್ಯರು; ಅವರು ಕರುಣೆ ಹೊಂದುವರು." ಮತ್ತಾ.5:7
7. "ಸಮಾಧಾನ ಪಡಿಸುವವರು ಧನ್ಯರು ಅವರು ದೇವರ ಮಕ್ಕಳು ಅನ್ನಿಸಿಕೊಳ್ಳುವರು." ಮತ್ತಾ.5:9
8. "ನನ್ನ ನಿಮಿತ್ತವಾಗಿ ಜನರು ನಿಮ್ಮನ್ನು ನಿಂದಿಸಿ ಹಿಂಸೆ ಪಡಿಸಿ ನಿಮ್ಮ ಮೇಲೆ ಕೆಟ್ಟ ಕೆಟ್ಟ ಮಾತುಗಳನ್ನು ಸುಳ್ಳಾಗಿ ಹೊರಿಸಿದರೆ ನೀವು ಧನ್ಯರು." ಮತ್ತಾ.5:11
9. "ಬಡವರಾದ ನೀವು ಧನ್ಯರು; ದೇವರ ರಾಜ್ಯವು ನಿಮ್ಮದೇ." ಲೂಕ 6:21
10. "ಈಗ ಹಸಿದಿರುವವರಾದ ನೀವು ಧನ್ಯರು; ನಿಮಗೆ ತೃಪ್ತಿಯಾಗುವದು." ಲೂಕ 6:20
11. "ಈಗ ಅಳುವವರಾದ ನೀವು ಧನ್ಯರು; ನೀವು ನಗುವಿರಿ." ಲೂಕ 6:20
12. "ಮನುಷ್ಯ ಕುಮಾರನ ನಿಮಿತ್ತವಾಗಿ ಜನರು ನಿಮ್ಮನ್ನು ಹಗೆ ಮಾಡಿ ನಿಮಗೆ ಬಹಿಷ್ಕಾರ ಹಾಕಿ ನಿಂದಿಸಿ ನಿಮ್ಮ ಹೆಸರನ್ನು ಕೆಟ್ಟದೆಂದು ತೆಗೆದು ಹಾಕಿದರೆ ನೀವು ಧನ್ಯರು." ಲೂಕ 6:22

13. "ಆ ದಿನದಲ್ಲಿ ನೀವು ಸಂತೋಷ ಪಡಿರಿ; ಕುಣಿದಾಡಿರಿ; ಪರಲೋಕದಲ್ಲಿ ನಿಮಗೆ ಬಹಳ ಫಲ ಸಿಕ್ಕುವದು ಎಂದು ತಿಳುಕೊಳ್ಳಿರಿ." ಲೂಕ 6:23

14. "ದೇವರ ವಾಕ್ಯವನ್ನು ಕೇಳಿ ಅದಕ್ಕೆ ಸರಿಯಾಗಿ ನಡಕೊಳ್ಳುವವರೇ ಧನ್ಯರು." ಲೂಕ 11:28

15. "ನನ್ನ ವಿಷಯದಲ್ಲಿ ಸಂಶಯ ಪಡದವನೇ ಧನ್ಯನು." ಲೂಕ 7:23

16. "ಯಜಮಾನನು ಬಂದು ಯಾವ ಯಾವ ಆಳುಗಳು ಎಚ್ಚರವಾಗಿರು ವದನ್ನು ಕಂಡುಕೊಳ್ಳುವನೋ ಆ ಆಳುಗಳೇ ಧನ್ಯರು." ಲೂಕ 12:37

17. "ನೀನು ನನ್ನನ್ನು ನೋಡಿದ್ದರಿಂದ ನಂಬಿದ್ದೀ; ನೋಡದೆ ನಂಬುವವರು ಧನ್ಯರು." ಯೋಹಾ.20:29

18. " ದಣಿಗಿಂದ ಆಳು ದೊಡ್ಡವನಲ್ಲ. ನೀವು ಇದನ್ನು ತಿಳುಕೊಂಡು ಇದರಂತೆ ಮಾಡಿದರೆ ನೀವು ಧನ್ಯರು." ಯೋಹಾ.13:17

19. "ಯೋನನ ಮಗನಾದ ಸಿಮೋನನೇ, ನೀನು ಧನ್ಯನು; ಈ ಗುಟ್ಟು ನಿನಗೆ ತಿಳಿಸಿದವನು ನರಮನುಷ್ಯನಲ್ಲ; ಪರಲೋಕದಲ್ಲಿರುವ ನನ್ನ ತಂದೆಯೇ." ಮತ್ತಾ.16:17

20. "ಯಜಮಾನನು ತನ್ನ ಮನೆಯವರಿಗೆ ಹೊತ್ತು ಹೊತ್ತಿಗೆ ಆಹಾರ ಕೊಡಲಿಕ್ಕೆ ಅವನ ಮೇಲಿಟ್ಟ ನಂಬಿಗಸ್ತನೂ ವಿವೇಕಿಯೂ ಆದಂಥ ಆಳು ಯಾರು? ಯಜಮಾನನು

ಬಂದು ಯಾವ ಆಳು ಹೀಗೆ ಮಾಡುವದನ್ನು ಕಾಣುವನೋ ಆ ಆಳು ಧನ್ಯನು.'' ಮತ್ತಾ.24:45.46

## 9. ತಂದೆಯಾದ ದೇವರು.

1. ''ಭೂಲೋಕದಲ್ಲಿ ಯಾರನ್ನೂ ನಮ್ಮ ತಂದೆ ಎಂದು ಕರೆಯಬೇಡಿರಿ; ಪರಲೋಕದಲ್ಲಿರುವಾತನೊಬ್ಬನೇ ನಿಮಗೆ ತಂದೆ.'' ಮತ್ತಾ.23:9
2. ''ಪರಲೋಕದಲ್ಲಿರುವ ನಿಮ್ಮ ತಂದೆಯು ಯಾವ ದೋಷವೂ ಇಲ್ಲದವನಾಗಿರುವಂತೆ ನೀವೂ ದೋಷವಿಲ್ಲದವರಾಗಿರ್ರಿ.'' ಮತ್ತಾ.5:48
3. ''ನಿಮ್ಮ ವೈರಿಗಳನ್ನು ಪ್ರೀತಿಸಿರಿ; ನಿಮ್ಮನ್ನು ಹಿಂಸೆ ಪಡಿಸುವವರಿಗೋಸ್ಕರ ದೇವರನ್ನು ಪ್ರಾರ್ಥಿಸಿರಿ. ಹೀಗೆ ಮಾಡಿದರೆ, ನೀವು ಪರಲೋಕದಲ್ಲಿರುವ ನಿಮ್ಮ ತಂದೆಗೆ ಮಕ್ಕಳಾಗುವಿರಿ.'' ಮತ್ತಾ.5:44,45
4. ''ನೀನು ಧರ್ಮಕೊಟ್ಟದ್ದು ಅಂತರಂಗವಾಗುವ ಹಾಗೆ ನಿನ್ನ ಬಲಗೈ ಮಾಡಿದ್ದು ಎಡಗೈಗೂ ತಿಳಿಯದಿರಲಿ. ಅಂತರಂಗದಲ್ಲಿ ನಡೆಯುವದನ್ನು ನೋಡುವ ನಿನ್ನ ತಂದೆಯು ನಿನಗೆ ಫಲ ಕೊಡುವನು.'' ಮತ್ತಾ.6:4
5. ''ಅವರೆಲ್ಲರೂ ದೇವರಿಂದ ಶಿಕ್ಷಿತರಾಗಿರುವರು ಎಂದು ಪ್ರವಾದಿಗಳ ಗ್ರಂಥದಲ್ಲಿ ಬರೆದಿದೆ.'' ಯೋಹಾ.6:45
6. ''ನೀವು ಜನರ ತಪ್ಪುಗಳನ್ನು ಕ್ಷಮಿಸಿದರೆ ಪರಲೋಕ ದಲ್ಲಿರುವ ನಿಮ್ಮ ತಂದೆಯು ನಿಮ್ಮ ತಪ್ಪುಗಳನ್ನು

ಕ್ಷಮಿಸುವನು." ಮತ್ತಾ.6:14

7. "ಚಿಕ್ಕ ಹಿಂಡೇ, ಹೆದರಬೇಡ; ಆ ರಾಜ್ಯವನ್ನು ನಿಮಗೆ ದಯಪಾಲಿಸುವದಕ್ಕೆ ನಿಮ್ಮ ತಂದೆಯು ಸಂತೋಷವುಳ್ಳವನಾಗಿದ್ದಾನೆ." ಲೂಕ 12:32

8. "ಕೆಟ್ಟವರಾದ ನೀವು ನಿಮ್ಮ ಮಕ್ಕಳಿಗೆ ಒಳ್ಳೆಯ ಪದಾರ್ಥಗಳನ್ನು ಕೊಡಬಲ್ಲವರಾದರೆ ಪರಲೋಕದಲ್ಲಿರುವ ನಿಮ್ಮ ತಂದೆಯು ತನ್ನನ್ನು ಬೇಡಿಕೊಳ್ಳುವವರಿಗೆ ಎಷ್ಟೋ ಹೆಚ್ಚಾಗಿ ಒಳ್ಳೆಯ ವರಗಳನ್ನು ಕೊಡುವನಲ್ಲವೇ? ಮತ್ತಾ.7:11

10. "ನನ್ನನ್ನು ಸ್ವಾಮಿಾ, ಸ್ವಾಮಿಾ, ಅನ್ನುವವರೆಲ್ಲರೂ ದೇವರ ರಾಜ್ಯವನ್ನು ಸೇರುವರೆಂದು ನೆನಸಬೇಡಿರಿ; ಪರಲೋಕದಲ್ಲಿರುವ ನನ್ನ ತಂದೆಯ ಚಿತ್ತದಂತೆ ನಡೆಯುವವನೇ ಪರಲೋಕ ರಾಜ್ಯಕ್ಕೆ ಸೇರುವನು." ಮತ್ತಾ.7:21

11. "ಮಾತಾಡುವವರು ನೀವಲ್ಲ; ನಿಮ್ಮ ತಂದೆಯ ಆತ್ಮನೇ ನಿಮ್ಮ ಮುಖಾಂತರವಾಗಿ ಮಾತಾಡುವನು." ಮತ್ತಾ.10:20

12. "ನನ್ನ ತಂದೆಯು ಎಲ್ಲರನ್ನೂ ನನಗೆ ಒಪ್ಪಿಸಿದ್ದಾನೆ. ತಂದೆಯೇ ಹೊರತು ಇನ್ನಾವನೂ ಮಗನನ್ನು ತಿಳಿದವನಲ್ಲ ಮತ್ತು ಮಗನು ತಂದೆಯನ್ನು ಯಾರಿಗೆ ಪ್ರಕಟಿಸುವದಕ್ಕೆ ಮನಸ್ಸುಳ್ಳವನಾಗಿದ್ದಾನೋ ಅವನೂ ಆತನನ್ನು ತಿಳಿದವನಾಗಿದ್ದಾನೆ." ಮತ್ತಾ.11:27

13. "ತಂದೆಯಾದ ದೇವರು ತನ್ನ ಮಗನನ್ನು ಪ್ರೀತಿಸಿ ಎಲ್ಲ

ವನ್ನೂ ಆತನ ಕೈಯಲ್ಲಿ ಕೊಟ್ಟಿದ್ದಾನೆ.'' ಯೋಹಾ.3:35

14. ''ದುಡಿಯಿರಿ, ಕೆಟ್ಟುಹೋಗುವ ಆಹಾರಕ್ಕಾಗಿ ದುಡಿಯ ಬೇಡಿರಿ, ನಿತ್ಯಜೀವಕ್ಕೆ ಉಳಿಯುವ ಆಹಾರಕ್ಕಾಗಿ ದುಡಿಯಿರಿ; ಇಂಥ ಆಹಾರವನ್ನು ಮನುಷ್ಯ ಕುಮಾರನು ನಿಮಗೆ ಕೊಡುವನು; ಇದಕ್ಕಾಗಿ ತಂದೆಯಾದ ದೇವರು ಆತನನ್ನು ನೇಮಿಸಿ ಮುದ್ರೆ ಹಾಕಿದ್ದಾನೆ.'' ಯೋಹಾ.6:27

15. ''ತಂದೆಯು ನನಗೆ ಕೊಡುವಂಥವರೆಲ್ಲರೂ ನನ್ನ ಬಳಿಗೆ ಬರುವರು; ಮತ್ತು ನನ್ನ ಬಳಿಗೆ ಬರುವವನನ್ನು ನಾನು ತಳ್ಳಿಬಿಡುವದೇ ಇಲ್ಲ.'' ಯೋಹಾ.6:37

16. '' ನನ್ನ ತಂದೆಯು ನನಗೆ ಕೊಟ್ಟಿದ್ದು ಎಲ್ಲಾದಕ್ಕಿಂತ ದೊಡ್ಡದು; ಅದನ್ನು ತಂದೆಯ ಕೈಯೊಳಗಿಂದ ಯಾರೂ ಕಸಕೊಳ್ಳಲಾರರು. ನಾನೂ ತಂದೆಯೂ ಒಂದಾಗಿದ್ದೇವೆ.'' ಯೋಹಾ.10:29,30

17. '' ತಂದೆಯು ಹೇಗೆ ಸತ್ತವರನ್ನು ಎಬ್ಬಿಸಿ ಬದುಕಿಸುತ್ತಾನೋ ಹಾಗೆಯೇ ಮಗನು ಸಹ ತನಗೆ ಬೇಕಾದವರನ್ನು ಬದುಕಿಸುತ್ತಾನೆಂದು ತಿಳಿದುಕೊಳ್ಳಿರಿ.'' ಯೋಹಾ.5:21

18. ''ತಂದೆಯು ತಾನು ಹೇಗೆ ಸ್ವತಃ ಜೀವವುಳ್ಳವನಾಗಿದ್ದಾನೋ ಹಾಗೆಯೇ ಮಗನೂ ಸ್ವತಃ ಜೀವವುಳ್ಳವನಾಗಿರುವಂತೆ ಮಾಡಿದನು.'' ಯೋಹಾ.5:26

19. ''ನಿಮ್ಮ ತಂದೆ ಕರುಣೆಯುಳ್ಳವನಾಗಿರುವ ಪ್ರಕಾರವೇ ನೀವೂ ಕರುಣೆಯುಳ್ಳವರಾಗಿರಿ.'' ಲೂಕ 6:36

20. "ನಿಮಗೆ ನಿಜ ನಿಜವಾಗಿ ಹೇಳುತ್ತೇನೆ, ನೀವು ತಂದೆಯನ್ನು ಏನಾದರೂ ಬೇಡಿಕೊಂಡರೆ ಅದನ್ನು ಆತನು ನನ್ನ ಹೆಸರಿನ ಮೇಲೆ ನಿಮಗೆ ಕೊಡುವನು." ಯೋಹಾ.16:23

## 10. ದೇವರು ನಮ್ಮ ಪೋಷಕನು.

1. "ಪ್ರಾಣಧಾರಣೆಗೆ ಏನು ಊಟ ಮಾಡಬೇಕು? ದೇಹ ರಕ್ಷಣೆಗೆ ಏನು ಹೊದ್ದುಕೊಳ್ಳಬೇಕು ಎಂದು ಚಿಂತೆ ಮಾಡಬೇಡಿರಿ." ಲೂಕ 12:22

2. "ಊಟಕ್ಕಿಂತ ಪ್ರಾಣವೂ ಉಡುಪಿಗಿಂತ ದೇಹವೂ ಮೇಲಾದದ್ದಷ್ಟೇ." ಲೂಕ 12:23

3. "ಕಾಗೆಗಳನ್ನು ಲಕ್ಷ್ಯವಿಟ್ಟು ಯೋಚಿಸಿರಿ; ಅವು ಬಿತ್ತುವದಿಲ್ಲ, ಕೊಯ್ಯುವದಿಲ್ಲ, ಅವುಗಳಿಗೆ ಉಗ್ರಾಣವೂ ಇಲ್ಲ. ಕಣಜವೂ ಇಲ್ಲ. ಆದಾಗ್ಯೂ ದೇವರು ಅವುಗಳನ್ನು ಸಾಕಿ ಸಲಹುತ್ತಾನೆ. ಹಕ್ಕಿಗಳಿಗಿಂತ ನೀವು ಎಷ್ಟೋ ಹೆಚ್ಚಿನವರಲ್ಲವೇ." ಲೂಕ 12:24

4. "ಹೂವುಗಳು ಬೆಳೆಯುವ ರೀತಿಯನ್ನು ಲಕ್ಷ್ಯವಿಟ್ಟು ಯೋಚಿಸಿರಿ; ಅವು ದುಡಿಯುವದಿಲ್ಲ, ನೂಲುವದಿಲ್ಲ; ಆದರೂ ಈ ಹೂವುಗಳಿಗಿರುವಷ್ಟು ಅಲಂಕಾರವು ಅರಸನಾದ ಸೊಲೊಮೋನನಿಗೆ ಸಹ ಅವನು ತನ್ನ ಸಕಲ ವೈಭವದಿಂದಿರುವಾಗಲೂ ಇರಲಿಲ್ಲ." ಲೂಕ 12:27

5. "ಎಲೈ ಅಲ್ಪ ವಿಶ್ವಾಸಿಗಳೇ, ಈ ಹೊತ್ತು ಇದ್ದು ನಾಳೆ ಒಲೆಯ ಪಾಲಾಗುವ ಅಡವಿಯ ಹುಲ್ಲಿಗೆ ದೇವರು ಹೀಗೆ

ಉಡಿಸಿದರೆ ಅದಕ್ಕಿಂತ ಎಷ್ಟೋ ಹೆಚ್ಚಾಗಿ ನಿಮಗೆ ಉಡಿಸಿ ತೊಡಿಸುವನು.'' ಲೂಕ 12:28

6. ''ಚಿಂತೆ ಮಾಡಿ ಒಂದು ಮೊಳ ಉದ್ದ ಬೆಳೆಯುವದು ನಿಮ್ಮಲ್ಲಿ ಯಾರಿಂದಾದೀತು?''ಲೂಕ 12:25

7. ''ಏನು ಊಟ ಮಾಡಬೇಕು? ಏನು ಕುಡಿಯಬೇಕು ಎಂದು ತವಕ ಪಡಬೇಡಿರಿ ಮತ್ತು ಅನುಮಾನ ಪಡಬೇಡಿರಿ. ಇವು ನಿಮಗೆ ಅವಶ್ಯವೆಂದು ನಿಮ್ಮ ತಂದೆಗೆ ತಿಳಿದದೆ.'' ಲೂಕ 12:29,30

8. ''ನೀವಾದರೋ ದೇವರರಾಜ್ಯಕ್ಕಾಗಿ ತವಕ ಪಡಿಸಿರಿ; ಇದರ ಕೂಡ ಅವು ನಿಮಗೆ ದೊರಕುವವು.'' ಲೂಕ 12:31

9. ''ದುಡ್ಡಿಗೆ ಎರಡು ಗುಬ್ಬಿಗಳನ್ನು ಮಾರುವದುಂಟಲ್ಲಾ; ಆದರೂ ನಿಮ್ಮ ತಂದೆಯ ಚಿತ್ತವಿಲ್ಲದೆ ಒಂದಾದರೂ ನೆಲಕ್ಕೆ ಬೀಳದು.'' ಮತ್ತಾ.10:29

10. ''ನಿಮ್ಮ ತಲೇ ಕೂದಲುಗಳು ಸಹ ಎಲ್ಲವೂ ಎಣಿಕೆಯಾಗಿವೆ.'' ಮತ್ತಾ.10:30

11. ''ಆದ್ದರಿಂದ ಹೆದರ ಬೇಡಿರಿ; ಬಹಳ ಗುಬ್ಬಿಗಳಿಗಿಂತ ನೀವು ಹೆಚ್ಚಿನವರು.'' ಮತ್ತಾ.10:31

12. ''ನಿಮ್ಮ ಹಮ್ಮಿಣಿಗಳಲ್ಲಿ ಹೊನ್ನು ಹಣ ದುಡ್ಡುಗಳನ್ನು ದಾರಿಗೆ ಹಸಿಬೆಯನ್ನೂ ಎರಡು ಅಂಗಿ ಕೆರ ಕೋಲು ಮೊದಲಾದವುಗಳನ್ನೂ ಸೌರಿಸಿಕೊಳ್ಳಬೇಡಿರಿ. ಆಳು ಅಂಬಲಿಗೆ ಯೋಗ್ಯನಷ್ಟೆ.'' ಮತ್ತಾ.10:9,10

13. "ಬೇಡಿಕೊಳ್ಳಿರಿ ನಿಮಗೆ ದೊರೆಯುವದು, ಹುಡುಕಿರಿ ನಿಮಗೆ ಸಿಕ್ಕುವದು. ತಟ್ಟಿರಿ ನಿಮಗೆ ತೆರೆಯುವದು. ಯಾಕೆಂದರೆ ಬೇಡಿಕೊಳ್ಳುವ ಪ್ರತಿಯೊಬ್ಬನು ಹೊಂದುವನು." ಮತ್ತಾ.7:7

14. "ನಿಮ್ಮಲ್ಲಿ ಯಾವನಾದರೂ ರೊಟ್ಟಿಯನ್ನು ಕೇಳುವ ಮಗನಿಗೆ ಕಲ್ಲನ್ನು ಕೊಡುವನೇ?" ಮತ್ತಾ.7:9

15. "ನೀವು ನನ್ನನ್ನು ಹುಡುಕುವದು ಸೂಚಕ ಕಾರ್ಯಗಳನ್ನು ನೋಡಿದ್ದರಿಂದಲ್ಲ. ಆ ರೊಟ್ಟಿ ತಿಂದು ಹೊಟ್ಟೆ ತುಂಬಿಸಿಕೊಂಡಿದ್ದರಿಂದಲೇ." ಯೋಹಾ.6:26

16. "ದುಡಿಯಿರಿ; ಕೆಟ್ಟು ಹೋಗುವ ಆಹಾರಕ್ಕಾಗಿ ದುಡಿಯಬೇಡಿರಿ. ನಿತ್ಯಜೀವಕ್ಕೆ ಉಳಿಯುವ ಆಹಾರಕ್ಕಾಗಿ ದುಡಿಯಿರಿ." ಯೋಹಾ.6:27

17. "ನಿಮಗೆ ನಿಜ ನಿಜವಾಗಿ ಹೇಳುತ್ತೇನೆ. ಮೋಶೆಯು ನಿಮಗೆ ಪರಲೋಕದಿಂದ ರೊಟ್ಟಿ ಕೊಟ್ಟವನಲ್ಲ. ನನ್ನ ತಂದೆಯು ಪರಲೋಕದಿಂದ ಬರುವ ನಿಜವಾದ ರೊಟ್ಟಿಯನ್ನು ನಿಮಗೆ ಕೊಡುತ್ತಾನೆ." ಯೋಹಾ.6:32

18. "ಜೀವಕೊಡುವ ರೊಟ್ಟಿ ನಾನೇ; ನನ್ನ ಬಳಿಗೆ ಬರುವವನಿಗೆ ಎಂದಿಗೂ ಹಸಿವೆಯಾಗುವದಿಲ್ಲ." ಯೋಹಾ.6:35

19. "ಪರಲೋಕದಿಂದ ಇಳಿದು ಬರುವ ಜೀವವುಳ್ಳ ರೊಟ್ಟಿಯು ನಾನೇ; ಈ ರೊಟ್ಟಿಯನ್ನು ಯಾವನಾದರೂ ತಿಂದರೆ ಅವನು ಸದಾಕಾಲ ಬದುಕುವನು." ಯೋಹಾ.6:51

20. "ನಿಮ್ಮ ಹಿರಿಯರು ಮನ್ನಾ ತಿಂದರೂ ಸತ್ತರು; ಇದು ಹಾಗಲ್ಲ; ಈ ರೊಟ್ಟಿಯನ್ನು ತಿನ್ನುವವನು ಸದಾಕಾಲ ಜೀವಿಸುವವನು." ಯೋಹಾ.6:58

## 11. ಜವಾಬ್ಧಾರಿಕೆ.

1. "ದೇಶಾಂತರಕ್ಕೆ ಹೋಗುವ ಒಬ್ಬ ಮನುಷ್ಯನು ತನ್ನ ಆಳ
ಗಳನ್ನು ಕರೆದು ಅವರಿಗೆ ತನ್ನ ಆಸ್ತಿಯನ್ನು ಒಪ್ಪಿಸಿಕೊಟ್ಟಂತ್ತಿರುವದು." ಮತ್ತಾ.25:1
2. "ಅವನು ಒಬ್ಬನಿಗೆ ಐದು ತಲಾಂತು, ಒಬ್ಬನಿಗೆ ಎರಡು, ಒಬ್ಬನಿಗೆ ಒಂದು, ಹೀಗೆ ಅವನವನ ಸಾಮರ್ಥ್ಯದ ಪ್ರಕಾ
ಕೊಟ್ಟು ಬೇರೊಂದು ದೇಶಕ್ಕೆ ಹೋದನು."ಮತ್ತಾ.25
3. "ಐದು ತಲಾಂತು ಹೊಂದಿದವನು ಹೋಗಿ ಅದನ್ನು ವ್ಯಾಪಾರಕ್ಕೆ ಹಾಕಿ ಇನ್ನೂ ಐದು ತಲಾಂತು ಗಳಿಸಿದನು. ಮತ್ತಾ.25:16
4. "ಎರಡು ತಲಾಂತು ಹೊಂದಿದವನು ಇನ್ನೂ ಎರಡು ಸಂಪಾದಿಸಿಕೊಂಡನು." ಮತ್ತಾ.25:17
5. "ಒಂದು ತಲಾಂತು ಹೊಂದಿದವನು ಹೋಗಿ ಭೂಮಿಯ
ಅಗಿದು ತನ್ನ ದಣಿಯ ಹಣವನ್ನು ಬಚ್ಚಿಟ್ಟನು." ಮತ್ತಾ.25:18
6. "ಆ ಆಳುಗಳ ದಣಿಯು ಬಂದು ಅವರಿಂದ ಲೆಕ್ಕ ತೆಗೆದುಕೊಂಡನು." ಮತ್ತಾ.25:19

7. "ಐದು ತಲಾಂತು ಹೊಂದಿದವನು ಮುಂದೆ ಬಂದು ಇನ್ನೂ ಐದು ತಲಾಂತು ತಂದು - ಸ್ವಾಮಿ, ನೀನು ಐದು ತಲಾಂತನ್ನು ನನಗೆ ಕೊಟ್ಟಿದ್ದೀಯಲ್ಲಾ; ಇಗೋ, ಇನ್ನೂ ಐದು ತಲಾಂತು ಸಂಪಾದಿಸಿದ್ದಾನೆ." ಮತ್ತಾ.25:20

8. "ಭಲಾ, ನಂಬಿಗಸ್ತನಾದ ಒಳ್ಳೇ ಆಳು ನೀನು; ಸ್ವಲ್ಪ ಕೆಲಸದಲ್ಲಿ ನಂಬಿಗಸ್ತನಾಗಿದ್ದೀ, ದೊಡ್ಡ ಕೆಲಸದಲ್ಲಿ ನಿನ್ನನ್ನು ಇಡುತ್ತೇನೆ. ನಿನ್ನ ದಣಿಯ ಸೌಭಾಗ್ಯದಲ್ಲಿ ಸೇರು." ಮತ್ತಾ.25:21

9. "ನೀನು ನನ್ನ ಹಣವನ್ನು ಸಾಹುಕಾರರಲ್ಲಿ ಬಡ್ಡಿಗೆ ಹಾಕಬೇಕಾಗಿತ್ತು; ನಾನು ಬಂದು ನನ್ನದನ್ನು ಬಡ್ಡಿ ಸಹಿತ ಪಡೆದುಕೊಳ್ಳುತ್ತಿದ್ದೆನು." ಮತ್ತಾ.25:27

10. "ಬುದ್ಧಿವಂತೆಯರು ತಮ್ಮ ಆರತಿಗಳ ಕೂಡ ಪಾತ್ರೆಗಳಲ್ಲಿ ಎಣ್ಣೆ ತಕ್ಕೊಂಡರು." ಮತ್ತಾ.25:4

11. "ನಿಮಗೆ ಕೊಟ್ಟರೆ ನಮಗೂ ನಿಮಗೂ ಕೂಡ ಸಾಲದೆ ಹೋದೀತು, ನೀವು ಮಾರುವವರ ಬಳಿಗೆ ಹೋಗಿ ಕೊಂಡು ಕೊಂಡರೆ ಒಳ್ಳೇದು." ಮತ್ತಾ.25:9

12. "ಮೈಗಳ್ಳನಾದ ಕೆಟ್ಟ ಆಳು ನೀನು; ನಾನು ಬಿತ್ತದಿರುವಲ್ಲಿ ಕೊಯ್ಯುವವನು, ತೂರದಿರುವಲ್ಲಿ ರಾಶಿ ಮಾಡಿಕೊಳ್ಳುವವನು ಎಂದು ತಿಳಿದಿಯಾ?" ಮತ್ತಾ.25:26

13. "ನನ್ನ ಯಜಮಾನನು ತಡ ಮಾಡುತ್ತಾನೆ ಅಂತ ತನ್ನ ಮನಸ್ಸಿನಲ್ಲಿ ಅಂದುಕೊಂಡು ತನ್ನ ಜೊತೆ ಆಳುಗಳನ್ನು

ಹೊಡೆಯುವದಕ್ಕೆ ತೊಡಗಿ ಕುಡುಕರ ಸಂಗಡ ತಿನ್ನುತ್ತಾ ಕುಡಿಯುತ್ತಾ ಇರುವದಾದರೆ, ಅವನು ನೆನಸದ ಗಳಿಗೆಯಲ್ಲಿಯೂ ಆ ಆಳಿನ ಯಜಮಾನನು ಬಂದು ಅವನನ್ನು ಕಠಿಣವಾಗಿ ಹೊಡಿಸುವನು.'' ಮತ್ತಾ.24:48-50

14. ''ನಿಮ್ಮ ನಡುಗಳು ಕಟ್ಟಿರಲಿ; ನಿಮ್ಮ ದೀವಟಿಗೆಗಳು ಉರಿಯುತ್ತಾ ಇರಲಿ.'' ಲೂಕ 12:35

15. ''ಎಲ್ಲಾ ಲೋಭಕ್ಕೂ ಎಚ್ಚರಿಕೆಯಾಗಿದ್ದು ನಿಮ್ಮನ್ನು ಕಾಪಾಡಿಕೊಳ್ಳಿರಿ. ಒಬ್ಬನಿಗೆ ಎಷ್ಟು ಆಸ್ತಿಯಿದ್ದರೂ ಅದು ಅವನಿಗೆ ಜೀವಾಧಾರವಾಗುವದಿಲ್ಲ.'' ಲೂಕ 12:15

16. ''ನನ್ನ ಯಜಮಾನನ ಚಿತ್ತವನ್ನು ತಿಳಿದ ಆಳು ಸಿದ್ಧಮಾಡದೆ ಹೋದರೆ ಅಥವಾ ಅವನ ಚಿತ್ತಕ್ಕನುಸಾರ ನಡೆಯದಿದ್ದರೆ ಅವನು ಬಹಳ ಪೆಟ್ಟು ತಿನ್ನುವನು.'' ಲೂಕ 12:47

17. ''ಯಾವನಿಗೆ ಬಹಳವಾಗಿ ಕೊಟ್ಟಿದೆಯೋ, ಅವನ ಕಡೆಯಿಂದ ಬಹಳವಾಗಿ ನಿರೀಕ್ಷಿಸಲ್ಪಡುವದು; ಇದಲ್ಲದೆ ಯಾವನ ವಶಕ್ಕೆ ಬಹಳವಾಗಿ ಒಪ್ಪಿಸಿದೆಯೋ ಅವನ ಕಡೆಯಿಂದ ಇನ್ನೂ ಹೆಚ್ಚಾಗಿ ಕೇಳುವರು.'' ಲೂಕ 12:48

18. ''ಇದ್ದವರಿಗೆಲ್ಲಾ ಕೊಡಲ್ಪಡುವದು, ಅವರಿಗೆ ಮತ್ತೂ ಹೆಚ್ಚಾಗುವದು; ಇಲ್ಲದವನ ಕಡೆಯಿಂದ ಇದ್ದದ್ದೂ ತೆಗೆಯಲ್ಪಡುವದು.'' ಮತ್ತಾ.25:29

19. ''ನೀವೂ ಸಹ ನನ್ನ ದ್ರಾಕ್ಷೇತೋಟಕ್ಕೆ ಹೋಗಿರಿ; ನಿಮಗೆ ಸರಿಯಾದ ಕೂಲಿಯನ್ನು ಕೊಡುತ್ತೇನೆ ಅನ್ನಲು ಅವರು ತೋಟಕ್ಕೆ ಹೋದರು.'' ಮತ್ತಾ.20:4

20. "ಹಾಗಾದರೆ ಯಜಮಾನನು ತನ್ನ ಮನೆಯವರಿಗೆ ಹೊತ್ತು ಹೊತ್ತಿಗೆ ಆಹಾರ ಕೊಡಲಿಕ್ಕೆ ಅವರ ಮೇಲಿಟ್ಟ, ನಂಬಿಗಸ್ತನೂ ವಿವೇಕಿಯೂ ಆದಂಥ ಆಳು ಯಾರು?" ಮತ್ತಾ.24:45

## 12. ದೀನತೆ.(ತಾಳ್ಮೆ)

1. "ನಾನು ಸಾತ್ವಿಕನೂ ದೀನಮನಸ್ಸುಳ್ಳವನೂ ಆಗಿರುವದರಿಂದ ನನ್ನ ನೊಗವನ್ನು ನಿಮ್ಮ ಮೇಲೆ ತೆಗೆದುಕೊಂಡು. ನನ್ನಲ್ಲಿ ಕಲಿತುಕೊಳ್ಳಿರಿ. ಆಗ ನಿಮ್ಮ ಆತ್ಮಗಳಿಗೆ ವಿಶ್ರಾಂತಿ ಸಿಕ್ಕುವದು."ಮತ್ತಾ.11:29

2. "ಆತ್ಮದಲ್ಲಿ ಬಡವರಾಗಿರುವವರು ಧನ್ಯರು; ಪರಲೋಕ ರಾಜ್ಯವು ಅವರದು." ಮತ್ತಾ.5:3

3. "ತಂದೆಯೇ, ಪರಲೋಕ ಭೂಲೋಕಗಳ ಒಡೆಯನೆ, ನೀನು ಜ್ಞಾನಿಗಳಿಗೂ ಬುದ್ಧಿವಂತರಿಗೂ ಈ ಮಾತುಗಳನ್ನು ಮರೆಮಾಡಿ ಬಾಲಕರಿಗೆ ಪ್ರಕಟ ಮಾಡಿದ್ದೀ ಎಂದು ನಿನ್ನನ್ನು ಕೊಂಡಾಡುತ್ತೇನೆ." ಮತ್ತಾ.11:25

4. "ನೀವು ತಿರಿಗಿಕೊಂಡು ಚಿಕ್ಕ ಮಕ್ಕಳಂತೆ ಆಗದೆ ಹೋದರೆ ನೀವು ಪರಲೋಕ ರಾಜ್ಯದಲ್ಲಿ ಸೇರುವದೇ ಇಲ್ಲ." ಮತ್ತಾ.18:3

5. "ಯಾವನು ಈ ಚಿಕ್ಕ ಮಗುವಿನಂತೆ ತನ್ನನ್ನು ತಗ್ಗಿಸಿಕೊಳ್ಳುತ್ತಾನೋ ಅವನೇ ಪರಲೋಕ ರಾಜ್ಯದಲ್ಲಿ ಹೆಚ್ಚಿನವನು." ಮತ್ತಾ.18:4

6. ''ಯಾವನಾದರೂ ಮೊದಲಿನವನಾಗಬೇಕೆಂದಿದ್ದರೆ ಅವನು ಎಲ್ಲರಲ್ಲಿ ಕಡೆಯವನೂ ಎಲ್ಲರ ಆಳೂ ಆಗಿರಬೇಕು.'' ಮಾರ್ಕ 9:35

7. ''ಯಾವನಾದರೂ ನಿನ್ನನ್ನು ಮದುವೆ ಊಟಕ್ಕೆ ಕರೆದರೆ ಪಂಕ್ತಿಯೊಳಗೆ ಮೊದಲನೆಯ ಸ್ಥಾನದಲ್ಲಿ ಕೂತುಕೊಳ್ಳಬೇಡ.'' ಲೂಕ 14:8

8. ''ತನ್ನನ್ನು ಹೆಚ್ಚಿಸಿಕೊಳ್ಳುವ ಪ್ರತಿಯೊಬ್ಬನು ತಗ್ಗಿಸಲ್ಪಡುವನು.'' ಲೂಕ 14:11

9. ''ನೀವು ಹಾಗಿರಬಾರದು; ನಿಮ್ಮಲ್ಲಿ ಹೆಚ್ಚಿನವನು ಚಿಕ್ಕವನಂತಾಗಬೇಕು. ಮುಖ್ಯಸ್ಥನು ಸೇವಕನಂತಾಗಬೆಕು.'' ಲೂಕ 22:26

10. ''ಹೇಗೂ ನನ್ನ ಚಿತ್ತವಲ್ಲ, ನಿನ್ನ ಚಿತ್ತವೇ ಆಗಲಿ.'' ಲೂಕ.22:42

11. ''ಸುಂಕದವನು ದೂರದಲ್ಲಿ ನಿಂತು ಆಕಾಶದ ಕಡೆಗೆ ಕಣ್ಣೆತ್ತಿ ನೋಡುವದಕ್ಕೂ ಮನಸ್ಸಿಲ್ಲದೆ ಎದೆಯನ್ನು ಬಡಿದುಕೊಳ್ಳುತ್ತಾ ದೇವರೇ ಪಾಪಿಯಾದ ನನ್ನನ್ನು ಕರುಣಿಸು ಅಂದನು.'' ಲೂಕ 18:13

12. ''ನೀವು ನಿಮಗೆ ಅಪ್ಪಣೆಯಾಗಿರುವದನ್ನೆಲ್ಲಾ ಮಾಡಿದ ಮೇಲೆ - ನಾವು ಆಳುಗಳು, ಪ್ರಯೋಜನವಿಲ್ಲದವರು, ಮಾಡಬೇಕಾದದ್ದನ್ನೇ ಮಾಡಿದ್ದೇವೆ ಅನ್ನಿರಿ.'' ಲೂಕ.17:10

13. “ಕರ್ತನೂ ಗುರುವೂ ಆಗಿರುವ ನಾನು ನಿಮ್ಮ ಕಾಲುಗಳನ್ನು ತೊಳೆದಿರಲಾಗಿ ನೀವೂ ಸಹ ಒಬ್ಬರ ಕಾಲನ್ನು ಒಬ್ಬರು ತೊಳೆಯುವ ಹಂಗಿನವರಾಗಿದ್ದೀರಿ.” ಯೋಹಾ.13:14

14. “ನಾನು ನಿಮಗೆ ಮಾಡಿದ ಮೇರೆಗೆ ನೀವೂ ಸಹ ಮಾಡುವಂತೆ ನಿಮಗೆ ಮಾದರಿಯನ್ನು ತೋರಿಸಿದ್ದೇನೆ.” ಯೋಹಾ.13:15

15. “ದಣಿಗಿಂತ ಆಳು ದೊಡ್ಡವನಲ್ಲ; ಕಳುಹಿಸಲ್ಪಟ್ಟವನು ಕಳುಹಿಸಿದವನಿಗಿಂತ ದೊಡ್ಡವನಲ್ಲ.” ಯೋಹಾ.13:16

16. “ಈ ಜನರನ್ನು ನೋಡಿ ಕನಿಕರ ಪಡುತ್ತೇನೆ; ಅವರು ನನ್ನ ಬಳಿಗೆ ಬಂದು ಈಗ ಮೂರು ದಿನವಾಯಿತು. ಅವರಿಗೆ ಊಟಕ್ಕೆ ಏನೂ ಇಲ್ಲ.” ಮತ್ತಾ.15:32

17. “ಚಿಯೋನ್ ನಗರಿಗೆ - ನೋಡು ನಿನ್ನ ಅರಸು, ನಿನ್ನ ಬಳಿಗೆ ಬರುತ್ತಾನೆ; ಆತನು ಶಾಂತ ಗುಣವುಳ್ಳವನಾಗಿಯೂ ಕತ್ತೆಯನ್ನು ಪ್ರಾಯದ ಕತ್ತೆ ಮರಿಯನ್ನು ಹತ್ತಿದವನಾಗಿಯೂ ಬರುತ್ತಾನೆಂದು ಹೇಳಿರಿ.” ಮತ್ತಾ.21:5

18. “ಯಾವನಾದರೂ ನನ್ನ ಹೆಸರಿನಲ್ಲಿ ಇಂಥ ಚಿಕ್ಕ ಮಕ್ಕಳಲ್ಲಿ ಒಂದನ್ನು ಸೇರಿಸಿಕೊಂಡರೆ ನನ್ನನ್ನು ಸೇರಿಸಿಕೊಂಡ ಹಾಗಾಯಿತು.” ಮಾರ್ಕ 9:37

19. “ನಿಮ್ಮಲ್ಲಿ ಮೊದಲನೆಯವನಾಗಬೇಕೆಂದಿರುವವನು ನಿಮ್ಮ ಸೇವಕನಾಗಿರಬೇಕು.” ಮಾರ್ಕ 10:44

20. “ಮನುಷ್ಯ ಕುಮಾರನು ಸಹ ಸೇವೆ ಮಾಡಿಸಿಕೊಳ್ಳುವದಕ್ಕೆ

ಬರಲಿಲ್ಲ, ಸೇವೆ ಮಾಡುವದಕ್ಕೂ ಅನೇಕರನ್ನು
ಬಿಡಿಸಿಕೊಳ್ಳುವದಕ್ಕೂ ತನ್ನ ಪ್ರಾಣವನ್ನು
ಈಡುಕೊಡುವದಕ್ಕೂ ಬಂದನು.'' ಮಾರ್ಕ.10:45

## 13. ಬೆಳಕಿನಲ್ಲಿ ನಡೆಯಿರಿ.

1. ''ಯಾರೂ ದೀಪವನ್ನು ಹಚ್ಚಿ ಮರೆಯಲ್ಲಾಗಲಿ ಕೊಳಗದೊಳಗಾಗಲಿ ಇಡುವದಿಲ್ಲ. ಮನೆಯೊಳಕ್ಕೆ ಬರುವವರಿಗ ಬೆಳಕು ಕಾಣಿಸುವಂತೆ, ಆ ದೀಪವನ್ನು ದೀಪಸ್ತಂಭದ ಮೇ ಇಡುತ್ತಾರಷ್ಟೆ.'' ಲೂಕ 11:33

2. ''ನಿನ್ನ ಕಣ್ಣು ದೇಹಕ್ಕೆ ದೀಪವಾಗಿದೆ. ನಿನ್ನ ಕಣ್ಣು ನೆಟ್ಟಗಿರುವಾಗ ಅದರಂತೆ ನಿನ್ನ ದೇಹವೆಲ್ಲಾ ಬೆಳಕಾಗಿರುವದು ಅದು ಕೆಟ್ಟದ್ದಾಗಿರುವಾಗ ಅದರಂತೆ ನಿನ್ನ ದೇಹವು ಕತ್ತಲಾಗಿರುವದು.'' ಲೂಕ 11:34

3. ''ಆದದರಿಂದ ನಿನ್ನೊಳಗಿರುವ ಬೆಳಕೇ ಕತ್ತಲಾಗಿದೆಯೋ ಏನೋ ನೋಡು.'' ಲೂಕ 11:35

4. ''ನೀವು ಲೋಕಕ್ಕೆ ಬೆಳಕಾಗಿದ್ದೀರಿ. ಗುಡ್ಡದ ಮೇಲೆ ಕಟ್ಟಿರುವ ಊರು ಮರೆಯಾಗಿರಲಾರದು.'' ಮತ್ತಾ.5:1

5. ''ನಿಮ್ಮ ಬೆಳಕು ಜನರ ಮುಂದೆ ಪ್ರಕಾಶಿಸಲಿ. ಹೀಗಾದರೆ ಅವರು ನಿಮ್ಮ ಒಳ್ಳೇ ಕ್ರಿಯೆಗಳನ್ನು ನೋಡಿ ಪರಲೋಕದರುವ ನಿಮ್ಮ ತಂದೆಯನ್ನು ಕೊಂಡಾಡುವರು.'' ಮತ್ತಾ.5:16

6. ''ನಿನ್ನ ದೇಹವೆಲ್ಲಾ ಬೆಳಕಾಗಿದ್ದು, ಒಂದು ಭಾಗದಲ್ಲಿಯ

ಕತ್ತಲಿಲ್ಲದ್ದಾಗಿದ್ದರೆ, ದೀಪವು ಹೊಳೆದು ನಿನಗೆ ಬೆಳಕನ್ನು ಕೊಡುವ ಕಾಲದಲ್ಲಿ ಹೇಗೋ ಹಾಗೆಯೇ ಅದು ಪೂರ್ಣವಾಗಿ ಬೆಳಕಾಗಿರುವದು.'' ಲೂಕ 11:36

7. ''ಹಗಲಿಗೆ ಹನ್ನೆರಡು ತಾಸು ಉಂಟಲ್ಲವೇ; ಒಬ್ಬನು ಹಗಲಲ್ಲಿ ತಿರುಗಾಡಿದರೆ ಈ ಲೋಕದ ಬೆಳಕು ಕಾಣಿಸುವದರಿಂದ ಅವನು ಎಡವುವದಿಲ್ಲ.'' ಯೋಹಾ.11:9

8. ''ರಾತ್ರಿಯಲ್ಲಿ ತಿರುಗಾಡಿದರೆ ಅವನಿಗೆ ಬೆಳಕಿಲ್ಲದ್ದರಿಂದ ಎಡವುವನು.'' ಯೋಹಾ.11:10

9. ''ಬೆಳಕು ಲೋಕಕ್ಕೆ ಬಂದಿದ್ದರೂ ಮನುಷ್ಯರ ಕೃತ್ಯಗಳು ಕೆಟ್ಟವುಗಳಾಗಿರುವದರಿಂದ ಅವರು ಬೆಳಕಿಗಿಂತ ಕತ್ತಲೆಯನ್ನೇ ಹೆಚ್ಚಾಗಿ ಪ್ರೀತಿಸಿದರು.'' ಯೋಹಾ.3:19

10. ''ಕೆಟ್ಟದ್ದನ್ನು ಮಾಡುವವರು ಬೆಳಕನ್ನು ಸಹಿಸುವದಿಲ್ಲ. ತಮ್ಮ ಕೃತ್ಯಗಳು ದುಷ್ಕೃತ್ಯಗಳಾಗಿ ತೋರಿಬಂದಾವೆಂದು ಬೆಳಕಿಗೆ ಬರುವದಿಲ್ಲ.'' ಯೋಹಾ.3:20

11. ''ಸತ್ಯವನ್ನು ಅನುಸರಿಸಿ ನಡೆಯುವವನು ತಾನು ದೇವರಿಂದ ನಡಿಸಿಕೊಂಡು ತನ್ನ ಕೃತ್ಯಗಳನ್ನು ಮಾಡಿದ್ದೇನೆಂದು ತೋರಿಬರುವಂತೆ ಬೆಳಕಿಗೆ ಬರುತ್ತಾನೆ.'' ಯೋಹಾ.3:21

12. ''ನಾನೇ ಲೋಕಕ್ಕೆ ಬೆಳಕು; ನನ್ನನ್ನು ಅನುಸರಿಸುವವನು ಕತ್ತಲೆಯಲ್ಲಿ ನಡೆಯದೆ ಜೀವಕೊಡುವ ಬೆಳಕನ್ನು ಹೊಂದಿದವನಾಗಿರುವನು.'' ಯೋಹಾ.8:12

13. ''ನಾನು ಕತ್ತಲೆಯಲ್ಲಿ ನಿಮಗೆ ಹೇಳುವದನ್ನು ನೀವು

ಬೆಳಕಿನಲ್ಲಿ ಹೇಳಿರಿ.'' ಮತ್ತಾ.10:27

14. ''ಆತನು ಅನ್ಯ ದೇಶದವರಿಗೆ ಜ್ಞಾನೋದಯದ ಬೆಳಕು.'' ಲೂಕ 2:32

15. ''ಇನ್ನು ಸ್ವಲ್ಪ ಕಾಲವೆ ಬೆಳಕು ನಿಮ್ಮಲ್ಲಿ ಇರುತ್ತದೆ. ಕತ್ತಲೆಯು ನಿಮ್ಮನ್ನು ಮುಸುಕಿಕೊಳ್ಳದಂತೆ ಬೆಳಕಿರುವಾಗಲೇ ಸಂಚಾರ ಮಾಡಿರಿ.'' ಯೋಹಾ.12:35

16. ''ನಿಮಗೆ ಬೆಳಕು ಇರುವಾಗಲೇ ಬೆಳಕನ್ನು ನಂಬಿರಿ. ನಂಬಿದರೆ ನೀವು ಬೆಳಕಿನವರಾಗುವಿರಿ. ಯೋಹಾ.12:36

17. ''ನನ್ನನ್ನು ನಂಬುವ ಒಬ್ಬನಾದರೂ ಕತ್ತಲಲ್ಲಿ ಇರಬಾರ ದೆಂದು ನಾನು ಬೆಳಕಾಗಿ ಈ ಲೋಕಕ್ಕೆ ಬಂದಿದ್ದೇನೆ.'' ಯೋಹಾ.12:46

18. ''ಯಾರೂ ದೀಪವನ್ನು ಹಚ್ಚಿ ಮಡಿಕೆಯಿಂದ ಮುಚ್ಚು ವದಿಲ್ಲ. ಮಂಚದ ಕೆಳಗೆ ಇಡುವದಿಲ್ಲ. ಮನೆಯೊಳಗೊ ಬರುವವರಿಗೆ ಬೆಳಕು ಕಾಣಿಸುವಂತೆ ಅದನ್ನು ದೀಪ ಸ್ತಂಭದ ಮೇಲೆ ಇಡುತ್ತಾರಷ್ಟೆ.'' ಲೂಕ 8:16

19. ''ಯೋನನಲ್ಲಿ ಆದ ಸೂಚಕ ಕಾರ್ಯವೇ ಹೊರತು ಬೇರೆ ಯಾವದೂ ಇದಕ್ಕೆ ಸಿಕಲುವದಿಲ್ಲ.'' ಲೂಕ 11:29

20. ''ನಿಜವಾದ ಬೆಳಕು ಲೋಕಕ್ಕೆ ಬರುವದಾಗಿತ್ತು. ಆ ಬೆಳಕೇ ಪ್ರತಿ ಮನುಷ್ಯನಿಗೂ ಬೆಳಕನ್ನು ಕೊಡುವಂಥದ್ದು.'' ಯೋಹಾ.1:9

## 14. ಸಂತೈಸುವ ನುಡಿಗಳು.

1. "ನಿಮ್ಮ ಹೃದಯವು ಕಳವಳಗೊಳ್ಳದೆ ಇರಲಿ. ದೇವರನ್ನು
ನಂಬಿರಿ, ನನ್ನನ್ನು ನಂಬಿರಿ." ಯೋಹಾ.14:1

2. "ನಾನು ಯುಗದ ಸಮಾಪ್ತಿಯವರೆಗೂ ಎಲ್ಲಾ ದಿವಸಗಳೂ
ನಿಮ್ಮ ಸಂಗಡ ಇರುತ್ತೇನೆ." ಮತ್ತಾ.28:20

3. "ನನ್ನ ಬಳಿ ಬರುವವನನ್ನು ನಾನು ತಳ್ಳಿಬಿಡುವದೇ ಇಲ್ಲ."
ಯೋಹಾ.6:37

4. "ನಾನು ನಿಮ್ಮನ್ನು ಅನಾಥರಾಗಿ ಬಿಡುವದಿಲ್ಲ. ನಿಮ್ಮ
ಬಳಿಗೆ ಬರುತ್ತೇನೆ. "ಯೋಹಾ.14:18

5. "ನಿಮಗೆ ದುಃಖವಾಗುವದು; ಆದರೆ ನಿಮ್ಮ ದುಃಖವು
ಹೋಗಿ ಆನಂದ ಬರುವದು." ಯೋಹಾ.16:20

6. "ಲೋಕದಲ್ಲಿ ನಿಮಗೆ ಸಂಕಟವುಂಟು; ಧೈರ್ಯವಾಗಿರಿ;
ನಾನು ಲೋಕವನ್ನು ಜಯಿಸಿದ್ದೇನೆ." ಯೋಹಾ.16:33

7. "ಯಾವನಿಗಾದರೂ ನೀರಡಿಕೆಯಾಗಿದ್ದರೆ ಅವನು ನನ್ನ
ಬಳಿಗೆ ಬಂದು ಕುಡಿಯಲಿ." ಯೋಹಾ.7:37

8. "ಚಿಕ್ಕ ಹಿಂಡೇ ಹೆದರಬೇಡ; ಆ ರಾಜ್ಯವನ್ನು ನಿಮಗೆ
ದಯಪಾಲಿಸುವದಕ್ಕೆ ನಿಮ್ಮ ತಂದೆಯು
ಸಂತೋಷವುಳ್ಳವನಾಗಿದ್ದಾನೆ." ಲೂಕ 12:32

9. "ಇದಲ್ಲದೆ ದೇಹವನ್ನು ಕೊಂದು ಆತ್ಮವನ್ನು
ಕೊಲ್ಲಲಾರದವರಿಗೆ ಹೆದರಬೇಡಿರಿ." ಮತ್ತಾ.10:28

10. ''ಎಲ್ಲೈ ಕಷ್ಟ ಪಡುವವರೇ, ಹೊರೆ ಹೊತ್ತವರೇ ನೀವೆಲ್ಲರೂ ನನ್ನ ಬಳಿಗೆ ಬನ್ನಿರಿ; ನಾನು ನಿಮಗೆ ವಿಶ್ರಾಂತಿ ಕೊಡುವೆನು.'' ಮತ್ತಾ.11:28

11. ''ನನ್ನ ನೊಗವನ್ನು ನಿಮ್ಮ ಮೇಲೆ ತೆಗೆದುಕೊಂಡು ನನ್ನಲ್ಲಿ ಕಲಿತುಕೊಳ್ಳಿರಿ. ಆಗ ನಿಮ್ಮ ಆತ್ಮಗಳಿಗೆ ವಿಶ್ರಾಂತಿ ಸಿಕ್ಕುವದು.'' ಮತ್ತಾ.11:29

12. ''ಈ ಚಿಕ್ಕವರಲ್ಲಿ ಒಬ್ಬನಾದರೂ ಕೆಟ್ಟು ಹೋಗುವದು ಪರಲೋಕದಲ್ಲಿರುವ ನಿಮ್ಮ ತಂದೆಯ ಚಿತ್ತವಲ್ಲ.'' ಮತ್ತಾ.18:14

13. ''ಅಮ್ಮಾ ನಿನ್ನ ನಂಬಿಕೆ ಬಹಳ; ನಿನ್ನ ಮನಸ್ಸಿನಂತೆ ಆಗಲಿ.'' ಮತ್ತಾ.15:28

14. ''ತಂದೆಯ ಆಶೀರ್ವಾದ ಹೊಂದಿದವರೇ ಬನ್ನಿರಿ,ಲೋಕಾದಿಯಿಂದ ನಿಮಗೋಸ್ಕರ ಸಿದ್ಧ ಮಾಡಿದ ರಾಜ್ಯವನ್ನು ಸ್ವಾಸ್ತ್ಯವಾಗಿ ತೆಗೆದುಕೊಳ್ಳಿರಿ.'' ಮತ್ತಾ.25:34

15. ''ನೀವು ಧೈರ್ಯಗೆಟ್ಟು ಹಿಂಜರಿಯಬಾರದೆಂದು ಇದನ್ನೆಲ್ಲಾ ನಿಮಗೆ ಹೇಳಿದ್ದೇನೆ.'' ಯೋಹಾ.16:1

16. ''ನಿಮ್ಮ ಹೃದಯಕ್ಕೆ ಆನಂದವಾಗುವದು ಮತ್ತು ನಿಮ್ಮ ಆನಂದವನ್ನು ಯಾರೂ ನಿಮ್ಮಿಂದ ತೆಗಯುವದಿಲ್ಲ.'' ಯೋಹಾ.16:22

17. ''ನೀವು ನನ್ನಲ್ಲಿದ್ದು ಮನಃಶ್ಯಾಂತಿಯನ್ನು ಹೊಂದಿದವರಾಗಿರಬೇಕೆಂದು ಇದನ್ನೆಲ್ಲಾ ನಿಮಗೆ ಹೇಳಿದ್ದೇನೆ.'' ಯೋಹಾ.16:33

18. ''ಶಾಂತಿಯನ್ನು ನಿಮಗೆ ಬಿಟ್ಟು ಹೋಗುತ್ತೇನೆ, ನನ್ನಲ್ಲಿರುವಂಥ ಶಾಂತಿಯನ್ನು ನಿಮಗೆ ಕೊಡುತ್ತೇನೆ; ಲೋಕವು ಕೊಡುವ ರೀತಿಯಿಂದ ನಾನು ನಿಮಗೆ ಕೊಡುವದಿಲ್ಲ.'' ಯೋಹಾ.14:27

19. ''ನನ್ನ ರಾಜ್ಯದಲ್ಲಿ ನೀವು ನನ್ನ ಮೇಜಿನ ಮೇಲೆ ಊಟ ಮಾಡುವಿರಿ, ಕುಡಿಯುವಿರಿ ಮತ್ತು ಸಿಂಹಾಸನಗಳ ಮೇಲೆ ಕೂತುಕೊಂಡು ಇಸ್ರಾಯೇಲಿನ ಹನ್ನೆರಡು ಕುಲಗಳಿಗೆ ನ್ಯಾಯ ತೀರಿಸುವಿರಿ.'' ಲೂಕ 22:30

20. ''ಕಂದಾ, ನೀನು ಯಾವಾಗಲೂ ನನ್ನ ಸಂಗಡ ಇದ್ದೀ ಮತ್ತು ನನ್ನದೆಲ್ಲಾ ನಿನ್ನದೇ.'' ಲೂಕ 15:31

## 15. ವಂಚಕ ಹೃದಯ

1. ''ಮನಸ್ಸಿನೊಳಗಿಂದ ಕೆಟ್ಟ ಆಲೋಚನೆ ಕೊಲೆ ಹಾದರ ಸೂಳೆಗಾರಿಕೆ ಕಳ್ಳತನ ಸುಳ್ಳು ಸಾಕ್ಷಿ ಬೈಗಳು ಹೊರಟು ಬರುತ್ತವೆ. ಮನುಷ್ಯನನ್ನು ಕೆಡಿಸುವಂಥವುಗಳು ಇವೇ.'' ಮತ್ತಾ.15:18,19

2. ''ಈ ಜನರು ಮಾತಿನಿಂದ ನನ್ನನ್ನು ಸನ್ಮಾನಿಸುತ್ತಾರೆ ಆದರೆ ಅವರ ಮನಸ್ಸು ನನಗೆ ದೂರವಾಗಿದೆ.''ಮಾರ್ಕ 7:6

3. ''ಹೊರಗಿನಿಂದ ಮನುಷ್ಯನೊಳಗೆ ಹೋಗುವಂಥದ್ದು ಅವನ ಹೃದಯದೊಳಕ್ಕೆ ಸೇರದೆ ಹೊಟ್ಟೆಯಲ್ಲಿ ಸೇರಿ ಬಹಿರ್ದೇಶಕ್ಕೆ ಹೋಗುವದರಿಂದ ಅವನನ್ನು ಹೊಲೆ ಮಾಡಲಾರದು.'' ಮಾರ್ಕ 7:19

4. ''ಮನುಷ್ಯರ ಮುಂದೆ ನೀತಿವಂತರೆಂದು
ತೋರಿಸಿಕೊಳ್ಳುವವರು ನೀವು; ಆದರೆ ದೇವರು ನಿಮ್ಮ
ಹೃದಯಗಳನ್ನು ತಿಳುಕೊಂಡಿದ್ದಾನೆ.'' ಲೂಕ 16:15

5. ''ನಿಮ್ಮ ವಿಷಯದಲ್ಲಿ ಜಾಗರೂಕರಾಗಿರ್ರಿ. ಅತಿಭೋಜನದ
ಮದಡಿನಿದಲೂ ಅಮಲಿನಿಂದಲೂ ಪ್ರಪಂಚದ ಚಿಂತೆ
ಯಿಂದಲೂ ನಿಮ್ಮ ಹೃದಯಗಳು ಭಾರವಾಗಿರಲಾಗಿ ಆ
ದಿವಸವು ನಿಮ್ಮ ಮೇಲೆ ಉರ್ಲಿನಂತೆ ಫಕ್ಕನೆ ಬಂದೀತು.''
ಲೂಕ.21:34

6. ''ಸುಳ್ಳು ಪ್ರವಾದಿಗಳ ವಿಷಯದಲ್ಲಿ ಎಚ್ಚರವಾಗಿರ್ರಿ; ಅವರು
ಕುರಿವೇಷ ಹಾಕಿಕೊಂಡು ನಿಮ್ಮ ಬಳಿಗೆ ಬರುತ್ತಾರೆ, ಆದರೆ
ಒಳಗೆ ನೋಡಿದರೆ ಅವರು ಒಡಿದುಕೊಂಡು ಹೋಗುವ
ತೋಳಗಳೇ.'' ಮತ್ತಾ.7:15

7. ''ನೀವು ಕಿವಿಯಿದ್ದು ಕೇಳಿದರೂ ತಿಳುಕೊಳ್ಳುವದೇ ಇಲ್ಲ;
ಕಣ್ಣಿದ್ದು ನೋಡಿದರು ಕಾಣುವದೇ ಇಲ್ಲ. ಈ ಜನರ
ಹೃದಯವು ಕೊಬ್ಬಿತು.'' ಮತ್ತಾ.13:14

8. ''ಯಾವನಾದರೂ ಪರಲೋಕ ರಾಜ್ಯದ ವಾಕ್ಯವನ್ನು ಕೇಳಿ
ತಿಳುಕೊಳ್ಳದೆ ಇರುವಲ್ಲಿ ಸೈತಾನನು ಬಂದು ಆ ಮನುಷ್ಯನ
ಮನಸ್ಸಿನಲ್ಲಿ ಬಿತ್ತಿದ್ದನ್ನು ತೆಗೆದು ಹಾಕುತ್ತಾನೆ''.
ಮತ್ತಾ.13:19

9. ''ನೀವು ಸಹ ಹೊರಗೆ ಜನರಿಗೆ ಸತ್ಪುರುಷರಂತೆ ಕಾಣಿಸಿ
ಕೊಳ್ಳುತ್ತೀರಿ ಸರಿ, ಆದರೆ ಒಳಗೆ ಕಪಟದಿಂದಲೂ ಅನ್ಯಾಯ
ದಿಂದಲೂ ತುಂಬಿದವರಾಗಿದ್ದೀರಿ.'' ಮತ್ತಾ.23:28

10. ''ಪರಸ್ತ್ರೀಯನ್ನು ನೋಡಿ ಮೋಹಿಸುವ ಪ್ರತಿ ಮನುಷ್ಯನು ಆಗಲೇ ತನ್ನ ಮನಸ್ಸಿನಲ್ಲಿ ಆಕೆಯ ಕೂಡ ವ್ಯಭಿಚಾರ ಮಾಡಿದವನಾದನು.'' ಮತ್ತಾ.5:28

11. ''ಹೃದಯದಲ್ಲಿ ತುಂಬಿರುವದೇ ಬಾಯಲ್ಲಿ ಹೊರಡುವದು.'' ಮತ್ತಾ.12:34

12. ''ಒಳ್ಳೆಯವನು ತನ್ನ ಒಳ್ಳೆಯ ಬೊಕ್ಕಸದೊಳಗಿಂದ ಒಳ್ಳೆಯ ವಸ್ತುಗಳನ್ನು ತೆಗೆಯುವನು.'' ಮತ್ತಾ.12:35

13. ''ಕೆಲವರು ದೇವರ ವಾಕ್ಯವನ್ನು ಕೇಳಿದ ಕೂಡಲೇ ಸೈತಾನನು ಬಂದು ಅವರು ನಂಬಿ ರಕ್ಷಣೆ ಹೊಂದಬಾರದೆಂದು ವಾಕ್ಯವನ್ನು ಅವರ ಹೃದಯದಿಂದ ತೆಗೆದು ಬಿಡುತ್ತಾನೆ.'' ಲೂಕ 8:12

14. ''ಆಗ ಆತನು ಅವರ ಮನಸ್ಸು ಕಲ್ಲಾಗಿರುವದನ್ನು ಕಂಡು ದುಃಖಪಟ್ಟನು.'' ಮಾರ್ಕ 3:5

15. ''ಯಾಕೆಂದರೆ ಅವರು ರೊಟ್ಟಿಯ ವಿಷಯವಾದ ಮಹತ್ಕಾರ್ಯವನ್ನು ಗ್ರಹಿಸಲಿಲ್ಲ; ಅವರ ಮನಸ್ಸು ಕಲ್ಲಾಗಿತ್ತು.'' ಮಾರ್ಕ 6:52

16. ''ಯಾವನಾದರೂ ಈ ಬೆಟ್ಟಕ್ಕೆ - ನೀನು ಕಿತ್ತುಕೊಂಡು ಹೋಗಿ ಸಮುದ್ರದಲ್ಲಿ ಬೀಳು ಎಂದು ಹೇಳಿ ತನ್ನ ಮನಸ್ಸಿನಲ್ಲಿ ಸಂಶಯಪಡದೆ ತಾನು ಹೇಳಿದ್ದು ಆಗುವದೆಂದು ನಂಬಿದರೆ ಅವನು ಹೇಳಿದಂತೆಯೇ ಆಗುವದು.'' ಮಾರ್ಕ 11:23

17. ''ಆದರೆ ಮರಿಯಳು ಆ ಮಾತುಗಳನ್ನೆಲ್ಲಾ ತನ್ನ

ಮನಸ್ಸಿನಲ್ಲಿಟ್ಟುಕೊಂಡು ಯೋಚಿಸುತ್ತಿದ್ದಳು.''
ಲೂಕ.2:19

18. ''ಪರಲೋಕದಲ್ಲಿ ಲಯವಾಗದ ದ್ರವ್ಯವನ್ನು ಇಟ್ಟು ಕೊಳ್ಳಿರಿ. ಅಲ್ಲಿ ಕಳ್ಳನು ಸಮೀಪಕ್ಕೆ ಬರುವದಿಲ್ಲ. ಅದು ನುಸಿ ಹಿಡಿದು ನಾಶವಾಗುವದಿಲ್ಲ. ನಿಮ್ಮ ಗಂಟು ಇದ್ದಲ್ಲಿಯೇ ನಿಮ್ಮ ಮನಸ್ಸು ಇರುವದಷ್ಟೇ.'' ಲೂಕ.12:33,34

19. ''ಎಲಾ ಬುದ್ದಿಯಿಲ್ಲದವರೇ, ಪ್ರವಾದಿಗಳು ಹೇಳಿದ್ದೆಲ್ಲವನ್ನೂ ನಂಬುವದರಲ್ಲಿ ಮಂದಹೃದಯರೇ.'' ಲೂಕ 24:25

20. ''ಆತನು ಅವರಿಗೆ ಯಾಕೆ ಕಳವಳಗೊಳ್ಳುತ್ತೀರಿ? ನಿಮ್ಮ ಹೃದಯದಲ್ಲಿ ಅನುಮಾನಗಳು ಹುಟ್ಟುವದೇಕೆ? ನನ್ನ ಕೈಗಳನ್ನೂ ನನ್ನ ಕಾಲುಗಳನ್ನೂ ನೋಡಿರಿ, ನಾನೇ ಅಲ್ಲವೇ?'' ಲೂಕ 24:38

## 16. ಐಶ್ವರ್ಯವು ಮಾಯೆ.

1. ''ಒಬ್ಬಾನೊಬ್ಬ ಐಶ್ವರ್ಯವಂತನ ಭೂಮಿಯು ಚೆನ್ನಾಗಿ ಬೆಳೆಯಿತು. ಆಗ ಅವನು ತನ್ನೊಳಗೆ - ನಾನೇನು ಮಾಡಲಿ? ನನ್ನ ಬೆಳೆಯನ್ನು ತುಂಬಿಡುವದಕ್ಕೆ ನನಗೆ ಸ್ಥಳವಿಲ್ಲವಲ್ಲಾ.'' ಲೂಕ 12:16.17

2. ''ಒಂದು ಕೆಲಸ ಮಾಡುತ್ತೇನೆ; ನನ್ನ ಕಣಜಗಳನ್ನು ಕೀಳಿಸಿ ಅವುಗಳಿಗಿಂತ ದೊಡ್ಡ ಕಣಜಗಳನ್ನು ಕಟ್ಟಿಸುವೆನು. ಅಲ್ಲಿ

ನನ್ನ ಎಲ್ಲಾ ದವಸ ಧಾನ್ಯಗಳನ್ನೂ ಸರಕುಗಳನ್ನೂ ತುಂಬಿಟ್ಟುಕೊಳ್ಳುವನು.'' ಲೂಕ 12:18

3. ''ನನ್ನ ಜೀವಾತ್ಮಕ್ಕೆ - ಜೀವವೇ, ಅನೇಕ ವರ್ಷಗಳಿಗೆ ಬೇಕಾಗುವಷ್ಟು ಸರಕು ಬಿದ್ದದೆ' ವಿಶ್ರಮಿಸಿಕೋ, ಊಟ ಮಾಡು, ಕುಡಿ, ಸುಖ ಪಡು ಎಂದು ಹೇಳುವೆನು.'' ಲೂಕ.12:19

4. ''ದೇವರು ಅವನಿಗೆ - ಬುದ್ಧಿಹೀನನು ನೀನು! ಈ ಹೊತ್ತು ರಾತ್ರಿ ನಿನ್ನ ಪ್ರಾಣವನ್ನು ನಿನ್ನ ಕಡೆಯಿಂದ ಕೇಳುವರು; ಆಗ ನೀನು ಸಿದ್ದ ಮಾಡಿಟ್ಟಿರುವದು ಯಾರಿಗಾಗುವದು'' ಲೂಕ.12:20

5. ''ತನಗೋಸ್ಕರ ದ್ರವ್ಯವನ್ನಿಟ್ಟುಕೊಂಡು ದೇವರ ವಿಷಯ ದಲ್ಲಿ ಐಶ್ವರ್ಯವಂತನಾಗದೆ ಇರುವವನು ಅವನಂತೆಯೇ ಇದ್ದಾನೆ.'' ಲೂಕ 12:21

6. ''ಭೂಲೋಕದಲ್ಲಿ ಗಂಟು ಮಾಡಿ ಇಟ್ಟುಕೊಳ್ಳಬೇಡಿರಿ; ಇಲ್ಲಿ ಅದು ನುಸಿ ಹಿಡಿದು ಕಿಲುಬು ಹತ್ತಿ ಕೆಟ್ಟು ಹೋಗುವದು; ಇಲ್ಲಿ ಕಳ್ಳರು ಕನ್ನಾ ಕೊರೆದು ಕದಿಯುವರು. ಮತ್ತಾ.6:19

7. ''ಒಬ್ಬ ಮನುಷ್ಯನು ಲೋಕವನ್ನೆಲ್ಲಾ ಸಂಪಾದಿಸಿಕೊಂಡರೂ ಪ್ರಾಣ ನಷ್ಟಪಟ್ಟರೆ ಅವನಿಗೆ ಪ್ರಯೋಜನವೇನು? '' ಮತ್ತಾ.16:26

8. ''ಒಬ್ಬನು ವಾಕ್ಯವನ್ನು ಕೇಳಿದಾಗ್ಯೂ ಪ್ರಪಂಚದ ಚಿಂತೆಯೂ ಐಶ್ವರ್ಯದಿಂದುಂಟಾಗುವ ಮೋಸವು ಆ ವಾಕ್ಯವನ್ನು

ಅಡಗಿಸಿ ಬಿಡುವದರಿಂದ ಫಲವನ್ನು ಕೊಡದೆ ಇರುತ್ತಾನೆ.'' ಮತ್ತಾ.13:22

9. ''ನೀನು ಸಂಪೂರ್ಣನಾಗಬೇಕೆಂದಿದ್ದರೆ ಹೋಗಿ ನಿನ್ನ ಆಸ್ತಿಯನ್ನು ಮಾರಿ ಬಡವರಿಗೆ ಕೊಡು; ಪರಲೋಕದಲ್ಲಿ ನಿನಗೆ ಸಂಪತ್ತಿರುವದು.'' ಮತ್ತಾ.19:21

10. ''ಐಶ್ವರ್ಯವಂತನು ಪರಲೋಕರಾಜ್ಯದಲ್ಲಿ ಸೇರುವದು ಕಷ್ಟ. ಐಶ್ವರ್ಯವಂತನು ದೇವರ ರಾಜ್ಯದಲ್ಲಿ ಸೇರುವದಕ್ಕಿಂತ ಒಂಟೆಯು ಸೂಜಿಯ ಕಣ್ಣಿನಲ್ಲಿ ನುಗ್ಗುವದು ಸುಲಭ.'' ಮತ್ತಾ.19:23, 24

11. ''ನಿಮಗೆ ನಿಜನಿಜವಾಗಿ ಹೇಳುತ್ತೇನೆ, ಬೊಕ್ಕಸದಲ್ಲಿ ಹಾಕಿದವರೆಲ್ಲರಲ್ಲಿ ಈ ಬಡ ವಿಧವೆ ಹೆಚ್ಚು ಹಾಕಿದ್ದಾಳೆ.'' ಮಾರ್ಕ 12:43

12. ''ಎಲ್ಲರೂ ತಮಗೆ ಸಾಕಾಗಿ ಮಿಕ್ಕದ್ದರಲ್ಲಿ ಹಾಕಿದರು; ಈಕೆಯೋ ತನ್ನ ಬಡತನದಲ್ಲಿಯೂ ತನಗಿದ್ದದ್ದನ್ನೆಲ್ಲಾ ಹಾಕಿದಳು. ತನ್ನ ಜೀವವನ್ನೇ ಕೊಟ್ಟುಬಿಟ್ಟಳು.'' ಮಾರ್ಕ 12:44

13. ''ಐಶ್ವರ್ಯವಂತನಾದ ಒಬ್ಬ ಮನುಷ್ಯನಿದ್ದು ಅವನು ಸಕಲಾತಿ ನಯವಾದ ನಾರುಮಡಿ ಮುಂತಾದ ವಸ್ತ್ರಗಳನ್ನು ಧರಿಸಿಕೊಂಡು ಪ್ರತಿದಿನವೂ ವೈಭವದೊಡನೆ ಸುಖಸಂತೋಷ ಪಡುತ್ತಿದ್ದನು.'' ಲೂಕ 16:19

14. ''ಐಶ್ವರ್ಯವಂತನು ಸತ್ತನು. ಅವನಿಗೆ ಉತ್ತರ ಕ್ರಿಯೆಗಳು ಆದವು. ಲೂಕ 16:22

15. ''ಆತನು ಪಾತಾಳದೊಳಗೆ ಯಾತನೆ ಪಡುತ್ತಾ ಇರುವಲ್ಲಿ ಕಣ್ಣೆತ್ತಿ ದೂರದಿಂದ ಅಬ್ರಹಾಮನನ್ನೂ ಇವನ ಎದೆಗೆ ಒರಗಿಕೊಂಡಿದ್ದ ಲಾಜರನನ್ನೂ ನೋಡಿ'' ಲೂಕ 16:23

16. ''ಧನವಂತರು ದೇವರ ರಾಜ್ಯದಲ್ಲಿ ಸೇರುವದು ಎಷ್ಟೋ ಕಷ್ಟ.'' ಮಾರ್ಕ 10:23

17. ''ಐಶ್ವರ್ಯವಂತರೇ, ನಿಮ್ಮ ಗತಿಯನ್ನು ಏನು ಹೇಳಲಿ! ನಿಮ್ಮ ಸುಖ ನಿಮಗೆ ಬಂದದೆ.'' ಲೂಕ 6:24

18. ''ಐಶ್ವರ್ಯವಂತರು ದೇವರ ರಾಜ್ಯದಲ್ಲಿ ಸೇರುವದಕ್ಕಿಂತ ಒಂಟೆಯು ಸೂಜಿ ಕಣ್ಣಿನಲ್ಲಿ ನುಗ್ಗುವದು ಸುಲಭ.'' ಲೂಕ.18:25

19. ''ಅವನು ಬಹಳ ಐಶ್ವರ್ಯವಂತನಾಗಿದ್ದರಿಂದ ಇದನ್ನು ಕೇಳಿ ಬಹಳ ವ್ಯಸನಗೊಂಡನು.'' ಲೂಕ 18:23

20. ''ಕಂದಾ, ನೀನು ಆಶಿಸಿದ ಸುಖವನ್ನು ನಿನ್ನ ಜೀವನದಲ್ಲಿ ಹೊಂದಿದೆ; ಹಾಗೆಯೇ ಲಾಜರನು ಕಷ್ಟವನ್ನು ಹೊಂದಿದನು ಎಂಬದನ್ನು ನೆನಪಿಗೆ ತಂದುಕೋ. ಈಗಲಾದರೋ ಇಲ್ಲಿ ಇವನಿಗೆ ಸಮಾಧಾನ, ಆದರೆ ನಿನಗೆ ಸಂಕಟ.'' ಲೂಕ.16:25

## 17. ಕಪಟತನ

1. ''ಜನರು ನೋಡಲಿ ಎಂದು ನಿಮ್ಮ ಧರ್ಮ ಕಾರ್ಯಗಳನ್ನು ಅವರ ಮುಂದೆ ಮಾಡಬಾರದು.'' ಮತ್ತಾ.6:1

2. ''ಇದಲ್ಲದೆ ನೀವು ಉಪವಾಸ ಮಾಡುವಾಗ ಕಪಟಿಗಳಂತೆ

ಮುಖವನ್ನು ಸಪ್ಪಗೆ ಮಡಿಕೊಳ್ಳಬೇಡಿರಿ.'' ಮತ್ತಾ.6:16

3. ''ಕಪಟಿಯೇ, ಮೊದಲು ನಿನ್ನ ಕಣ್ಣಿನೊಳಗಿನಿಂದ ತೊಲೆಯನ್ನು ತೆಗೆದು ಹಾಕಿಕೋ; ಆ ಮೇಲೆ ನಿನ್ನ ಸಹೋದರನ ಕಣ್ಣಿನೊಳಗಿಂದ ರವೆಯನ್ನು ತೆಗೆಯುವದಕ್ಕೆ ಚೆನ್ನಾಗಿ ಕಾಣಿಸುವದು.'' ಮತ್ತಾ.7:5

4. ''ಸುಳ್ಳು ಪ್ರವಾದಿಗಳ ವಿಷಯದಲ್ಲಿ ಎಚ್ಚರವಾಗಿರ್ರಿ. ಅವರು ಕುರಿ ವೇಷ ಹಾಕಿಕೊಂಡು ನಿಮ್ಮ ಬಳಿಗೆ ಬರುತ್ತಾರೆ. ಒಳಗೆ ನೋಡಿದರೆ ಅವರು ಹಿಡುಕೊಂಡು ಹೋಗುವ ತೋಳಗಳೇ.'' ಮತ್ತಾ.7:16

5. ''ಅವರ ಫಲಗಳಿಂದ ಅವರನ್ನು ತಿಳುಕೊಳ್ಳುವಿರಿ. ಮುಳ್ಳು ಗಿಡಗಳಲ್ಲಿ ದ್ರಾಕ್ಷೇ ಹಣ್ಣುಗಳನ್ನೂ ಮದ್ದುಗುಣಿಕೇ ಗಿಡಗಳಲ್ಲಿ ಅಂಜೂರಗಳನ್ನೂ ಕೊಯ್ಯುವದುಂಟೇ?'' ಮತ್ತಾ.7:16

6. ''ಒಳ್ಳೆ ಫಲವನ್ನು ಕೊಡದ ಎಲ್ಲಾ ಮರಗಳನ್ನೂ ಕಡಿದು ಬೆಂಕಿಯಲ್ಲಿ ಹಾಕುತ್ತಾರೆ.'' ಮತ್ತಾ.7:19

7. ''ಮೋಶೆಯು ನಿಮಗೆ ಧರ್ಮಶಾಸ್ತ್ರವನ್ನು ಕೊಟ್ಟಿದ್ದರೂ ನಿಮ್ಮಲ್ಲಿ ಒಬ್ಬನಾದರು ಧರ್ಮಶಾಸ್ತ್ರದಂತೆ ನಡೆಯುವದಿಲ್ಲವಲ್ಲಾ.'' ಯೋಹಾ.7:19

8. ''ಕಣ್ಣಿಗೆ ತೋರಿದ್ದರ ಮೇಲೆ ತೀರ್ಪು ಮಾಡಬೇಡಿರಿ; ನ್ಯಾಯವಾದ ತೀರ್ಪು ಮಾಡಿರಿ.'' ಯೋಹಾ.7:24

9. ''ದಾರಿ ತೋರಿಸುವ ಕುರುಡರೇ, ನೀವು ಸೊಳ್ಳೆ ಸೋಸುವವರು, ಒಂಟೇ ನುಂಗುವವರು.'' ಮತ್ತಾ.23:24

10. "ನೀವು ಸಹ ಹೊರಗೆ ಜನರಿಗೆ ಸತ್ಪುರುಷರಂತೆ ಕಾಣಿಸಿಕೊಳ್ಳುತ್ತೀರಿ ಸರಿ, ಆದರೆ ಒಳಗೆ ಕಪಟದಿಂದಲೂ ಅನ್ಯಾಯದಿಂದಲೂ ತುಂಬಿದವರಾಗಿದ್ದೀರಿ." ಮತ್ತಾ.23:28

11. "ನೀವು ನನ್ನನ್ನು ಸ್ವಾಮಿಾ, ಸ್ವಾಮಿಾ ಅಂತ ಕರೆದು ನಾನು ಹೇಳುವದನ್ನು ನಡಿಸದೆ ಇರುವದೇಕೆ?" ಲೂಕ 6:46

12. "ಎಚ್ಚರಿಕೆ, ಫರಿಸಾಯರ ಮತ್ತು ಹೆರೋದನ ಹುಳಿ ಹಿಟ್ಟಿನ ವಿಷಯದಲ್ಲಿ ನೋಡಿಕೊಳ್ಳಿರಿ." ಮಾರ್ಕ 8:15

13. "ಶಾಸ್ತ್ರಿಗಳು ಫರಿಸಾಯರೂ ಮೋಶೆಯ ಪೀಠದಲ್ಲಿ ಕೂತುಕೊಂಡಿದ್ದಾರೆ; ಆದದರಿಂದ ಅವರು ನಿಮಗೆ ಏನೇನು ಹೇಳುತ್ತಾರೋ ಅದನ್ನೆಲ್ಲಾ ಮಾಡಿರಿ, ಕಾಪಾಡಿಕೊಳ್ಳಿರಿ; ಆದರೆ ಅವರ ನಡತೆಯ ಪ್ರಕಾರ ನಡೆಯಬೇಡಿರಿ." ಮತ್ತಾ.23:1

14. "ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ನೀವು ಒಬ್ಬನನ್ನು ನಿಮ್ಮ ಮತದಲ್ಲಿ ಸೇರಿಸಿಕೊಳ್ಳುವದಕ್ಕಾಗಿ ಭೂಮಿಯನ್ನೂ ಸಮುದ್ರವನ್ನೂ ಸುತ್ತಿಕೊಂಡು ಬರುತ್ತೀರಿ. ಅವನು ಸೇರಿದ ಮೇಲೆ ಅವನನ್ನು ನಿಮಗಿಂತ ಎರಡರಷ್ಟಾಗಿ ನರಕ ಪಾತ್ರರನ್ನಾಗ ಮಾಡುತ್ತೀರಿ." ಮತ್ತಾ.23:15

15. "ನೀವು ಮರುಗ ಸೋಪು ಜೀರಿಗೆಗಳಲ್ಲಿ ಹತ್ತರಲ್ಲೊಂದು ಪಾಲು ಕೊಡುತ್ತೀರಿ ಸರಿ, ಆದರೆ ಧರ್ಮಶಾಸ್ತ್ರದಲ್ಲಿ ಗೌರವವಾದದ್ದನ್ನು, ಅಂದರೆ ನ್ಯಾಯವನ್ನೂ ಕರುಣೆಯನ್ನೂ ಬಿಟ್ಟುಬಿಟ್ಟಿರಿ." ಮತ್ತಾ.23:23

16. "ನೀವು ಪಂಚಪಾತ್ರೆ ಬಟ್ಟಲು ಇವುಗಳ ಹೊರಭಾಗವನ್ನು

ಶುಚಿ ಮಾಡುತ್ತೀರಿ; ಆದರೆ ಅವು ಒಳಗೆ ಸುಲುಕೊಂಡವುಗಳಿಂದಲೂ ಇಹಭೋಗ ಪದಾರ್ಥಗಳಿಂದಲೂ ತುಂಬಿರುತ್ತವೆ.'' ಮತ್ತಾ.23:25

17. ''ಫರಿಸಾಯರ ಮತ್ತು ಸದ್ದುಕಾಯರ ಬೋಧನೆಯನ್ನು ಕುರಿತು ಎಚ್ಚರಿಕೆಯಾಗಿರಬೇಕೆಂದು ಹೇಳಿದನು.'' ಮತ್ತಾ.16:12

18. ''ಮನುಷ್ಯರು ಕಲ್ಪಿಸಿದ ಕಟ್ಟಳೆಗಳನ್ನೇ ಅವರು ಬೋಧಿಸುವದರಿಂದ ನನಗೆ ಭಕ್ತಿ ತೋರಿಸುವದು ವ್ಯರ್ಥ.'' ಮಾರ್ಕ 7:7

19. ''ನೀವು ನಿಮ್ಮ ಹಿರಿಯರ ಪಾಪದ ಅಳತೆಯನ್ನು ಪೂರ್ತಿ ಮಾಡಿರಿ. ಹಾವುಗಳೇ ಸರ್ಪ ಜಾತಿಯವರೇ, ನರಕ ದಂಡನೆಗೆ ಹೇಗೆ ತಪ್ಪಿಸಿಕೊಂಡೀರಿ. ಮತ್ತಾ.23:33

20. ''ಪರಲೋಕದಲ್ಲಿರುವ ನನ್ನ ತಂದೆಯು ನೆಡದೆ ಇರುವ ಗಿಡಗಳೆಲ್ಲಾ ಬೇರಿನೊಂದಿಗೆ ಕಿತ್ತು ಹಾಕಲ್ಪಡುವವು.'' ಮತ್ತಾ.15:13

## 18. ಎಚ್ಚರವಾಗಿರ್ರಿ.

1. ''ಶೋಧನೆಗೆ ಒಳಗಾಗದಂತೆ ಎಚ್ಚರವಾಗಿದ್ದು ಪ್ರಾರ್ಥಿಸಿರಿ.'' ಮತ್ತಾ.26:41

2. ''ಮನೇ ಯಜಮಾನನು ಸಂಜೆಯಲ್ಲೋ ಸರುಹೊತ್ತಿನಲ್ಲೋ ಯಾವಾಗ ಬರುತ್ತಾನೋ ನಿಮಗೆ ಗೊತ್ತಿಲ್ಲದ ಕಾರಣ ಎಚ್ಚರವಾಗಿರಿ.'' ಮಾರ್ಕ 13:35

3. ''ನಿಮ್ಮ ನಡುಗಳು ಕಟ್ಟಿರಲಿ; ನಿಮ್ಮ ದೀವಟಿಗೆಗಳು ಉರಿಯುತ್ತಾ ಇರಲಿ.'' ಲೂಕ 12:35
4. ''ನೀವಂತೂ ತಮ್ಮ ಯಜಮಾನನು ಬಂದು ತಟ್ಟಿದ ಕೂಡಲೇ ಕದವನ್ನು ತೆರಯುವದಕ್ಕೆ ಸಿದ್ಧವಾಗಿದ್ದು ಮದುವೆ ಊಟವನ್ನು ಯಾವಾಗ ತೀರಿಸಿಕೊಂಡು ಬರುವನೋ ಎಂದು ಅವನನ್ನು ಎದುರು ನೋಡುತ್ತಿರುವ ಮನುಷ್ಯರಂತಿರಿ.'' ಲೂಕ 12:36
5. ''ನೀವೂ ಸಹ ಸಿದ್ಧರಾಗಿರ್ರಿ, ನೀವು ನೆನಸದ ಗಳಿಗೆಯಲ್ಲಿ ಮನುಷ್ಯ ಕುಮಾರನು ಬರುತ್ತಾನೆ.'' ಲೂಕ 12:40
6. ''ಎಲ್ಲಾ ಲೋಭಕ್ಕೂ ಎಚ್ಚರಿಕೆಯಾಗಿದ್ದು ನಿಮ್ಮನ್ನು ಕಾಪಾಡಿಕೊಳ್ಳಿರಿ. ಒಬ್ಬನಿಗೆ ಎಷ್ಟು ಆಸ್ತಿಯಿದ್ದರೂ ಅದು ಅವನಿಗೆ ಜೀವಾಧಾರವಾಗುವದಿಲ್ಲ.'' ಲೂಕ 12:15
7. ''ತನ್ನ ಯಜಮಾನನ ಚಿತ್ತವನ್ನು ತಿಳಿದ ಆಳು ಸಿದ್ಧ ಮಾಡದೆ ಹೋದರೆ ಅಥವ ಅವನ ಚಿತ್ತಕ್ಕನುಸಾರ ನಡೆಯದಿದ್ದರೆ ಅವನು ಬಹಳ ಪೆಟ್ಟು ತಿನ್ನುವನು.'' ಲೂಕ 12:47
8. ''ಇಗೋ ಕ್ರಿಸ್ತನು ಇಲ್ಲಿದ್ದಾನೆ. ಅಗೋ ಅಲ್ಲಿದ್ದಾನೆ ಎಂದು ಹೇಳಿದರೆ ನಂಬಬೇಡಿರಿ.'' ಮಾರ್ಕ 13:21
9. ''ಸುಳ್ಳು ಕ್ರಿಸ್ತರೂ ಸುಳ್ಳು ಪ್ರವಾದಿಗಳೂ ಎದ್ದು ಸಾಧ್ಯವಾದರೆ ದೇವರಾದುಕೊಂಡವರನ್ನು ಮೋಸಗೊಳಿಸುವದಕ್ಕೋಸ್ಕರ ಸೂಚಕ ಕಾರ್ಯಗಳನ್ನೂ ಅದ್ಭುತ ಕಾರ್ಯಗಳನ್ನೂ ಮಾಡಿ ತೋರಿಸುವರು.'' ಮಾರ್ಕ 13:22
10. ''ಆ ದಿವಸಗಳು ಸಂಕಟದ ದಿನಗಳಾಗಿರುವದರಿಂದ ಇದೆಲ್ಲಾ

ಚಳಿಗಾಲದಲ್ಲಿ ಆಗಬಾರದೆಂದು ಪ್ರಾರ್ಥನೆ ಮಾಡಿರಿ.'' ಮಾರ್ಕ 13:19

11. ''ಶಾಸ್ತ್ರಿಗಳ ವಿಷಯದಲ್ಲಿ ಎಚ್ಚರಿಕೆಯಾಗಿರಿ. ನಿಲುವಂಗಿಗಳನ್ನು ತೊಟ್ಟುಕೊಂಡು ತಿರುಗಾಡುವದು, ಅಂಗಡಿ ಬೀದಿಗಳಲ್ಲಿ ನಮಸ್ಕಾರಗಳು, ಸಭಾ ಮಂದಿರಗಳಲ್ಲಿ ಮುಖ್ಯ ಪೀಠಗಳು, ಔತಣಪ್ರಸ್ತಗಳಲ್ಲಿ ಪ್ರಥಮ ಸ್ಥಾನಗಳು, ಇವುಗಳಲ್ಲಿಯೇ ಅವರು ಮನಸ್ಸುಳ್ಳವರಾಗಿದ್ದಾರೆ.''ಮಾರ್ಕ.12:39

12. ''ಕಳ್ಳನು ಬರುವ ಜಾವ ಮನೆಯ ಯಜಮಾನನಿಗೆ ತಿಳಿದಿದ್ದರೆ ಅವನು ಎಚ್ಚರವಾಗಿದ್ದು ತನ್ನ ಮನೆಗೆ ಕನ್ನಾ ಹಾಕಗೊಡಿಸುತ್ತಿರಲಿಲ್ಲ.'' ಮತ್ತಾ.24:43

13. ''ಆ ದಿವಸವು ಭೂನಿವಾಸಿಗಳೆಲ್ಲರ ಮೇಲೆ ಬರುವದು. ಆದರೆ ಬರುವದಕ್ಕಿರುವ ಇವೆಲ್ಲವುಗಳೊಳಗಿಂದ ತಪ್ಪಿಸಿಕೊಳ್ಳುವದಕ್ಕೂ ಮನುಷ್ಯ ಕುಮಾರನ ಮುಂದೆ ನಿಂತುಕೊಳ್ಳುವದಕ್ಕೂ ನೀವು ಪೂರ್ಣ ಶಕ್ತರಾಗುವಂತೆ ಎಲ್ಲಾ ಕಾಲದಲ್ಲಿಯೂ ದೇವರಿಗೆ ವಿಜ್ಞಾಪನೆ ಮಾಡಿಕೊಳ್ಳುತ್ತಾ ಎಚ್ಚರವಾಗಿರ್ರಿ.'' ಲೂಕ 21:36

14. ''ಅವನು ಏಕಾ ಏಕಿ ಬಂದು ನೀವು ನಿದ್ದೆ ಮಾಡುವದನ್ನು ಕಂಡಾನು.'' ಮಾರ್ಕ 13:35,36

15. ''ಆ ಮೇಲೆ ಆತನು ಶಿಷ್ಯರ ಬಳಿಗೆ ಬಂದು ಅವರು ನಿದ್ದೆ ಮಾಡುವದನ್ನು ಕಂಡು ಪೇತ್ರನಿಗೆ ಹೀಗೋ? ಒಂದು ಗಳಿಗೆಯಾದರೂ ನನ್ನ ಸಂಗಡ ಎಚ್ಚರವಾಗಿರಲಾರಿರಾ?'' ಮತ್ತಾ.26:40

16. “ನಾನು ನಿಮಗೆ ಹೇಳಿದ್ದನ್ನು ಎಲ್ಲರಿಗೂ ಹೇಳುತ್ತೇನೆ ಎಚ್ಚರವಾಗಿರಿ.” ಮಾರ್ಕ 13:37

17. “ಯಜಮಾನನು ಬಂದು ಯಾವ ಯಾವ ಆಳುಗಳು ಎಚ್ಚರವಾಗಿರುವದನ್ನು ಕಂಡುಕೊಳ್ಳುವನೋ ಆ ಆಳುಗಳೇ ಧನ್ಯರು.” ಲೂಕ 12:37

18. “ಮರೆಯಾಗಿರುವ ಯಾವದೂ ವ್ಯಕ್ತವಾಗುವದೆ ಇರುವದಿಲ್ಲ; ಹೊರಪಡದ ರಹಸ್ಯವೂ ಇಲ್ಲ.” ಲೂಕ 12:2

19. “ನೀವು ಸುಣ್ಣಾ ಹಚ್ಚಿದ ಸಮಾಧಿಗಳಿಗೆ ಹೋಲಿಕೆಯಾಗಿದ್ದೀರಿ; ಇವು ಹೊರಗೆ ಚಂದವಾಗಿ ಕಾಣುತ್ತದೆ.” ಮತ್ತಾ 23:27

20. “ಅವರು ಭಾರವಾದ ಹೊರೆಗಳನ್ನು ಕಟ್ಟಿ, ಜನರ ಹೆಗಲಿನ ಮೇಲೆ ಹೊರಿಸುತ್ತಾರೆ; ತಾವಾದರೋ ಬೆರಳಿನಿಂದ ಮುಟ್ಟಲೊಲ್ಲರು.” ಮತ್ತಾ.23:4

## 19. ಜೀವ

1. “ನಾನೇ ಪುನರುತ್ಥಾನವೂ ಜೀವವೂ ಆಗಿದ್ದೇನೆ. ನನ್ನನ್ನು ನಂಬುವವನು ಸತ್ತರೂ ಬದುಕುವನು.” ಯೋಹಾ.11:25

2. “ನಾನಾದರೋ ಅವುಗಳಿಗೆ ಜೀವವು ಇರಬೇಕೆಂತಲೂ ಸಮೃದ್ಧಿಯು ಇರಬೇಕೆಂತಲೂ ಬಂದೆನು.” ಯೋಹಾ.10:10

3. “ನಾನೇ ಒಳ್ಳೇ ಕುರುಬನು; ಒಳ್ಳೇ ಕುರುಬನು ತನ್ನ

ಕುರಿಗಳಿಗೋಸ್ಕರ ತನ್ನ ಪ್ರಾಣವನ್ನು ಕೊಡುತ್ತಾನೆ.'' ಯೋಹಾ.10:11

4. ''ಬದುಕಿಸುವಂಥದ್ದು ಆತ್ಮವೇ; ಮಾಂಸವು ಯಾವದಕ್ಕೂ ಬರುವದಿಲ್ಲ.'' ಯೋಹಾ.6:63

5. ''ಜೀವ ಕೊಡುವ ರೊಟ್ಟಿ ನಾನೇ;'' ಯೋಹಾ.6:48

6. ''ದೇವರು ಕೊಡುವ ಆ ರೊಟ್ಟಿ ಯಾವದೆಂದರೆ ಪರಲೋಕದಿಂದ ಇಳಿದು ಬಂದು ಲೋಕಕ್ಕೆ ಜೀವವನ್ನುಂಟು ಮಾಡುವಂಥದ್ದೇ'' ಯೋಹಾ.6:33

7. ''ನನ್ನ ನಿಮಿತ್ತವಾಗಿಯೂ ಸುವಾರ್ತೆಯ ನಿಮಿತ್ತವಾಗಿಯೂ ತನ್ನ ಪ್ರಾಣವನ್ನು ಕಳಕೊಂಡವನು ಅದನ್ನು ಉಳಿಸಿಕೊಳ್ಳುವನು.'' ಮಾರ್ಕ 8:35

8. ''ಒಬ್ಬ ಮನುಷ್ಯನು ಲೋಕವನ್ನೆಲ್ಲಾ ಸಂಪಾದಿಸಿಕೊಂಡರೂ ಪ್ರಾಣ ನಷ್ಟಪಟ್ಟರೆ ಅವನಿಗೆ ಪ್ರಯೋಜನವೇನು?'' ಮಾರ್ಕ 8:36

9. ''ಆತನು ಜೀವಿತರಿಗೆ ದೇವರಾಗಿದ್ದಾನೆ ಹೊರತು ಜೀವವಿಲ್ಲದವರಿಗೆ ಅಲ್ಲ.'' ಮತ್ತಾ.22:34

10. ''ನಿತ್ಯಜೀವಕ್ಕೆ ಹೋಗುವ ಬಾಗಿಲು ಇಕ್ಕಟ್ಟು ದಾರಿ ಬಿಕ್ಕಟ್ಟು; ಅದನ್ನು ಕಂಡು ಹಿಡಿಯುವರು ಸ್ವಲ್ಪ ಜನ.'' ಮತ್ತಾ.7:14

11. ''ಅವನು ಸತ್ತ ಮೂರನೆಯ ದಿನದಲ್ಲಿ ಜೀವಿತನಾಗಿ ಎಬ್ಬಿಸಲ್ಪಡುವನು.'' ಮತ್ತಾ.20:19

12. "ಒಬ್ಬನಿಗೆ ಎಷ್ಟು ಆಸ್ತಿಯಿದ್ದರೂ ಅದು ಅವನಿಗೆ ಜೀವಾಧಾರವಾಗುವದಿಲ್ಲ." ಲೂಕ 12:15
13. "ನನ್ನ ಬಳಿಗೆ ಬಂದು ತನ್ನ ತಂದೆ ತಾಯಿ ಹೆಂಡತಿ ಮಕ್ಕಳು ಅಣ್ಣ ತಮ್ಮಂದಿರು ಅಕ್ಕತಂಗಿಯರು ಇವರನ್ನೂ ತನ್ನ ಪ್ರಾಣವನ್ನೂ ಸಹ ಹಗೆ ಮಾಡದಿದ್ದರೆ ಅವನು ನನ್ನ ಶಿಷ್ಯನಾಗಿರಲಾರನು." ಲೂಕ 14:26
14. "ನಾನು ಅವನಿಗೆ ಕೊಡುವ ನೀರು ಅವನಲ್ಲಿ ಉಕ್ಕುವ ಒರತೆಯಾಗಿದ್ದು ನಿತ್ಯಜೀವವನ್ನು ಉಂಟು ಮಾಡುವದು." ಯೋಹಾ.4:14
15. "ತಂದೆಯು ತಾನು ಹೇಗೆ ಸ್ವತಃ ಜೀವವುಳ್ಳವನಾಗಿದ್ದಾನೋ ಹಾಗೆಯೇ ಮಗನೂ ಸ್ವತಃ ಜೀವವುಳ್ಳವನಾಗಿರುವಂತೆ ಮಾಡಿದನು." ಯೋಹಾ.5:26
16. "ಒಳ್ಳೇದನ್ನು ಮಾಡಿದವನಿಗೆ ಜೀವಕ್ಕಾಗಿ ಪುನರುತ್ಥಾನವಾಗುವದು; ಕೆಟ್ಟದ್ದನ್ನು ನಡಿಸಿದವನಿಗೆ ತೀರ್ಪಿಗಾಗಿ ಪುನರುತ್ಥಾನವಾಗುವದು." ಯೋಹಾ.5:29
17. "ಶಾಸ್ತ್ರಗಳಿಂದ ನಿತ್ಯಜೀವವು ದೊರೆಯುತ್ತದೆಂದು ನೀವು ನೆನಸಿ ಅವುಗಳನ್ನು ವಿಚಾರಿಸುತ್ತೀರಲ್ಲಾ; ಅವುಗಳೂ ನನ್ನ ವಿಷಯದಲ್ಲಿ ಸಾಕ್ಷಿಕೊಡುವವುಗಳಾಗಿವೆ." ಯೋಹಾ.5:39
18. "ನಿಮಗೆ ನಿಜನಿಜವಾಗಿ ಹೇಳುತ್ತೇನೆ, ನೀವು ಮನುಷ್ಯ ಕುಮಾರನ ಮಾಂಸವನ್ನು ತಿನ್ನದೆ ಅವನ ರಕ್ತವನ್ನು

ಕುಡಿಯದೆ ಹೋದರೆ ನಿಮ್ಮೊಳಗೆ ನಿತ್ಯಜೀವವಿಲ್ಲ." ಯೋಹಾ.6:53

19. "ನಾನು ತಿರಿಗಿ ಪಡಕೊಳ್ಳುತ್ತೇನೆಂದು ನನ್ನ ಪ್ರಾಣವನ್ನು ಕೊಡುತ್ತೇನೆ." ಯೋಹಾ.10:17

20. "ಪ್ರಾಣವನ್ನೇ ಸ್ನೇಹಿತರಿಗೋಸ್ಕರ ಕೊಡುವ ಪ್ರೀತಿಗಿಂತ ಹೆಚ್ಚಿನ ಪ್ರೀತಿಯು ಯಾವದೂ ಇಲ್ಲ." ಯೋಹಾ.15:13

21. "ನಾನೇ ಪುನರುತ್ಥಾನವೂ ಜೀವವೂ ಆಗಿದ್ದೇನೆ. ನನ್ನನ್ನು ನಂಬುವವನು ಸತ್ತರೂ ಬದುಕುವನು; ಮತ್ತು ಬದುಕುತ್ತಾ ನನ್ನನ್ನು ನಂಬುವ ಪ್ರತಿಯೊಬ್ಬನು ಎಂದಿಗೂ ಸಾಯುವದಿಲ್ಲ." ಯೋಹಾ.11:25, 26

## 20 ದೇವರ ರಾಜ್ಯ

1. " ನೀವು ಮೊದಲು ದೇವರ ರಾಜ್ಯಕ್ಕಾಗಿಯೂ ನೀತಿಗಾಗಿಯೂ ತವಕ ಪಡಿರಿ. ಇವುಗಳ ಕೂಡ ಅವೆಲ್ಲವೂ ನಿಮಗೆ ದೊರಕುವವು." ಮತ್ತಾ 6:33

2. " ದೇವರ ರಾಜ್ಯವು ನಿಮ್ಮಲ್ಲಿಯೇ ಅದೆ ಅಂತ ತಿಳುಕೊಳ್ಳಿರಿ." ಲೂಕ 17:21

3. "ನಾನು ದೇವರ ಆತ್ಮನ ಬಲದಿಂದಲೇ ದೆವ್ವಗಳನ್ನು ಬಿಡಿಸುವದಾದರೆ ದೇವರ ರಾಜ್ಯವು ನಿಮ್ಮ ಹತ್ತಿರಕ್ಕೆ ಬಂತಲ್ಲಾ" ಮತ್ತಾ 12:28

4. " ಐಶ್ವರ್ಯವಂತನು ದೇವರ ರಾಜ್ಯದಲ್ಲಿ ಸೇರುವದಕ್ಕಿಂತ

ಒಂಟೆಯು ಸೂಜಿಯಕಣ್ಣಿನಲ್ಲಿ ನುಗ್ಗಿ ಹೋಗುವದು ಸುಲಭ'' ಮಾರ್ಕ 10:25

5. ‘‘ಕಾಲವು ಪರಿಪೂರ್ಣವಾಯಿತು. ದೇವರ ರಾಜ್ಯವು ಸಮಿಾಪಿಸಿತು ದೇವರ ಕಡೆಗೆ ತಿರುಗಿಕೊಂಡು ಸುವಾರ್ತೆಯನ್ನು ನಂಬಿರಿ'' ಮಾರ್ಕ 1:15.

6. ‘‘ಧನವಂತನು ದೇವರ ರಾಜ್ಯದಲ್ಲಿ ಸೇರುವದು ಎಷ್ಟೋಕಷ್ಟ'' ಮಾರ್ಕ 10:23

7. ‘‘ದೇವರ ರಾಜ್ಯದ ಗುಟ್ಟು ನಿಮಗೇ ಕೊಟ್ಟಿದೆ. ಹೊರಗಿನವರಿಗೆ ಎಲ್ಲಾವು ಸಾಮ್ಯದ ಮರೆಯಲ್ಲಿದೆ '' ಮಾರ್ಕ 4:11

8. ‘‘ದೇವರ ರಾಜ್ಯದಲ್ಲಿ  ಚಿಕ್ಕವನು ಅವನಿಗಿಂತಲೂ ದೊಡ್ಡವನೆಂದು ನಮಗೆ ಹೇಳುತ್ತೇನೆ. ಲೂಕ 7:28.

9. ‘‘ಇಲ್ಲಿ ನಿಂತಿರುವವರೊಳಗೆ ಕೆಲವರು ದೇವರ ರಾಜ್ಯವನ್ನು ನೋಡುವ ತನಕ ಮರಣ ಹೊಂದುವದೇ ಇಲ್ಲ'' ಲೂಕ.9:27

10. ‘‘ಯಾವನು ಶಿಶುಭಾವದಿಂದ ದೇವರ ರಾಜ್ಯವನ್ನು ಅಂಗಿಕರಿಸುವದಿಲ್ಲವೋ ಅವನು ಅದರಲ್ಲಿ ಸೇರುವದೇ ಇಲ್ಲ.'' ಲೂಕ 18:17.

11. ‘‘ಮಕ್ಕಳನ್ನು ನನ್ನ ಹತ್ತಿರ ಬರಗೊಡಿಸಿರಿ.  ಅವುಗಳಿಗೆ ಅಡ್ಡಿಮಾಡಬೇಡಿರಿ, ದೇವರ ರಾಜ್ಯವು ಇಂಥವರದೇ'' ಲೂಕ 18:16.

12. ''ಇಂದಿನಿಂದ ದೇವರ ರಾಜ್ಯವು ಬರುವ ತನಕ ನಾನು ದ್ರಾಕ್ಷಾರಸವನ್ನು ಕುಡಿಯುವದೇ ಇಲ್ಲ.'' ಲೂಕ 22:18
13. ''ದೇವರ ರಾಜ್ಯವು ಪ್ರತ್ಯಕ್ಷವಾಗಿ ಬರುವಂಥದಲ್ಲ.'' ಲೂಕ 17:20.
14. ''ಎರಡು ಕಣ್ಣುಳ್ಳವನಾಗಿದ್ದು ನರಕದಲ್ಲಿ ಹಾಕಿಸಿಕೊಳ್ಳುವದಕ್ಕಿಂತ ಒಂದೇ ಕಣ್ಣುಳ್ಳವನಾಗಿದ್ದು ದೇವರ ರಾಜ್ಯದಲ್ಲಿ ಸೇರುವದು ನಿನಗೆ ಉತ್ತಮ.'' ಮಾರ್ಕ 9:47
15. ''ಬಡವರಾದ ನೀವು ಧನ್ಯರು; ದೇವರ ರಾಜ್ಯವು ನಿಮ್ಮದೆ'' ಲೂಕ 6:21
16. ''ಸತ್ತವರು ತಮ್ಮಲ್ಲಿ ಸತ್ತುಹೋದವರ ಉತ್ತರ ಕ್ರಿಯೆಗಳನ್ನು ಮಾಡಲಿ, ನೀನಂತು ಹೋಗಿ ದೇವರ ರಾಜ್ಯವನ್ನು ಪ್ರಸಿದ್ಧಪಡಿಸು'' ಲೂಕ 9:60.
17. ''ಧರ್ಮಶಾಸ್ತ್ರವೂ ಪ್ರವಾದಿಗಳೂ ಯೋಹಾನನ ತನಕವೇ, ಈಚೆಗೆ ದೇವರ ರಾಜ್ಯವು ಸಾರಲ್ಪಡುತ್ತಾ ಇದೆ'' ಲೂಕ.16:16.
18. ''ಲೌಕೀಕರು ತಮ್ಮಂಥವರ ವಿಷಯದಲ್ಲಿ ಬೆಳಕಿನ ರಾಜ್ಯದವರಿಗಿಂತಲೂ ಜಾಣರಾಗಿದ್ದಾರೆ.'' ಲೂಕ 16:8.
19. '' ಒಬ್ಬನು ನೀರಿನಿಂದಲೂ ಆತ್ಮನಿಂದಲೂ ಹುಟ್ಟದಿದ್ದರೆ ದೇವರ ರಾಜ್ಯಕ್ಕೆ ಸೇರಲಾರನು'' ಯೋಹಾನ 3:5.
20. ''ಒಬ್ಬನು ಹೊಸದಾಗಿ ಹುಟ್ಟದಿದ್ದರೆ, ಅವನು ದೇವರ ರಾಜ್ಯವನ್ನು ಕಾಣಲಾರನು'' ಯೋಹಾ 3:3.

## 21. ಪರಲೋಕ ರಾಜ್ಯ.

1. ''ಪರಲೋಕ ರಾಜ್ಯವು ಸಮೀಪಿಸಿತು. ದೇವರ ಕಡೆಗೆ ತಿರಿಗಿಕೊಳ್ಳಿರಿ.'' ಮತ್ತಾ.4:17

2. ''ಆತ್ಮದಲ್ಲಿ ಬಡವರಾಗಿರುವವರು ಧನ್ಯರು; ಪರಲೋಕ ರಾಜ್ಯವು ಅವರದು.'' ಮತ್ತಾ.5:3

3. ''ನೀತಿಯ ನಿಮಿತ್ತವಾಗಿ ಹಿಂಸೆಯನ್ನು ತಾಳಿಕೊಳ್ಳುವವರು ಧನ್ಯರು; ಪರಲೋಕ ರಾಜ್ಯವು ಅವರದು.'' ಮತ್ತಾ.5:10

4. ''ಈ ಸಣ್ಣ ಸಣ್ಣ ಆಜ್ಞೆಗಳಲ್ಲಿಯಾದರೂ ಒಂದನ್ನು ಮೀರಿ ಜನರಿಗೂ ಹಾಗೆ, ಮೀರುವದಕ್ಕೆ ಬೋಧಿಸುವವನು ಪರಲೋಕ ರಾಜ್ಯದಲ್ಲಿ ಚಿಕ್ಕವನೆನಿಸಿಕೊಳ್ಳುವನು.'' ಮತ್ತಾ.5:19

5. ''ನಿಮ್ಮ ನೀತಿಯು ಶಾಸ್ತ್ರಿಗಳ ಮತ್ತು ಫರಿಸಾಯರ ನೀತಿಗಿಂತಲೂ ಹೆಚ್ಚಿನದಾಗದಿದ್ದರೆ ನೀವು ಪರಲೋಕ ರಾಜ್ಯದಲ್ಲಿ ಸೇರಲಾರಿರಿ.'' ಮತ್ತಾ.5:20

6. ''ಪರಲೋಕ ರಾಜ್ಯದಲ್ಲಿರುವ ನಿಮ್ಮ ತಂದೆಯು ಯಾವ ದೋಷವೂ ಇಲ್ಲದವನಾಗಿರುವಂತೆ ನೀವೂ ದೋಷವಿಲ್ಲದವರಾಗಿರ್ರಿ.'' ಮತ್ತಾ.5:48

7. ''ಪರಲೋಕದಲ್ಲಿ ಗಂಟು ಮಾಡಿ ಇಟ್ಟುಕೊಳ್ಳಿರಿ; ಅಲ್ಲಿ ಅದು ನುಸಿ ಹಿಡಿದು ಕಿಲುಬು ಹತ್ತಿ ಕೆಟ್ಟು ಹೋಗುವದಿಲ್ಲ.'' ಮತ್ತಾ.6:20

8. ''ಪರಲೋಕದಲ್ಲಿರುವ ನನ್ನ ತಂದೆಯ ಚಿತ್ತದಂತೆ

ನಡೆಯುವವನೇ ನನಗೆ ತಮ್ಮನೂ ತಂಗಿಯೂ ತಾಯಿಯೂ ಆಗಬೇಕು.'' ಮತ್ತಾ.12:50

9. ''ಪರಲೋಕ ರಾಜ್ಯವು ಸಾಸಿವೆ ಕಾಳಿಗೆ ಹೋಲಿಕೆಯಾಗಿದೆ.'' ಮತ್ತಾ.13:31

10. ''ಪರಲೋಕ ರಾಜ್ಯವು ಹುಳಿಹಿಟ್ಟಿಗೆ ಹೋಲಿಕೆಯಾಗಿದೆ. ಅದನ್ನು ಒಬ್ಬ ಹೆಂಗಸು ತಕ್ಕೊಂಡು ಮೂರು ಸೇರು ಹಿಟ್ಟಿನಲ್ಲಿ ಕಲಿಸಿಡಲು ಹಿಟ್ಟೆಲ್ಲಾ ಹುಳಿಯಾಯಿತು.'' ಮತ್ತಾ.13:33

11. ''ಪರಲೋಕ ರಾಜ್ಯವು ಹೊಲದಲ್ಲಿ ಹೂಳಿಟ್ಟ ದ್ರವ್ಯಕ್ಕೆ ಹೋಲಿಕೆಯಾಗಿದೆ. ಒಬ್ಬನು ಅದನ್ನು ಕಂಡುಕೊಂಡು ಮುಚ್ಚಿಬಿಟ್ಟು ಅದರಿಂದಾದ ಸಂತೋಷದಿಂದ ತನ್ನ ಬದುಕನ್ನೆಲ್ಲಾ ಮಾರಿ ಆ ಹೊಲವನ್ನು ಕೊಂಡುಕೊಂಡನು.'' ಮತ್ತಾ.13:44

12. ''ಪರಲೋಕ ರಾಜ್ಯದ ಬೀಗದ ಕೈಗಳನ್ನು ನಿನಗೆ ಕೊಡುವೆನು; ಭೂಲೋಕದಲ್ಲಿ ನೀನು ಯಾವದನ್ನು ಕಟ್ಟುತ್ತೀಯೋ ಅದು ಪರಲೋಕದಲ್ಲಿಯೂ ಕಟ್ಟಿರುವದು.'' ಮತ್ತಾ.16:19

13. ''ಪರಲೋಕ ರಾಜ್ಯವು ಒಂದು ಬಲೆಗೆ ಹೋಲಿಕೆಯಾಗಿದೆ. ಅದನ್ನು ಸಮುದ್ರದಲ್ಲಿ ಹಾಕಿ ಎಲ್ಲಾ ಜಾತಿಯ ಮೀನುಗಳನ್ನು ಹಿಡಿದರು.'' ಮತ್ತಾ.13:47

14. ''ಪರಲೋಕ ರಾಜ್ಯದ ವಿಷಯವಾಗಿ ಉಪದೇಶ ಹೊಂದಿ ಶಿಕ್ಷಿತನಾದ ಪ್ರತಿಯೊಬ್ಬ ಶಾಸ್ತ್ರೋಪದೇಶಕನೂ ಮನೇ

ಯಜಮಾನನಿಗೆ ಹೋಲಿಕೆಯಾಗಿದ್ದಾನೆ.'' ಮತ್ತಾ.13:52

15. ''ಪರಲೋಕ ರಾಜ್ಯವು ಒಳ್ಳೆಯ ಬೀಜವನ್ನು ತನ್ನ ಹೊಲದಲ್ಲಿ ಬಿತ್ತಿದ ಒಬ್ಬ ಮನುಷ್ಯನಿಗೆ ಹೋಲಿಕೆಯಾಗಿದೆ.'' ಮತ್ತಾ.13:24

16. ''ಪರಲೋಕ ರಾಜ್ಯದ ಗುಟ್ಟುಗಳನ್ನು ತಿಳಿಯುವ ವರವು ನಿಮಗೇ ಕೊಟ್ಟಿದೆ ಅವರಿಗೆ ಕೊಟ್ಟಿಲ್ಲ.'' ಮತ್ತಾ.13:11

17. ''ದೆವ್ವಗಳು ನಮಗೆ ಅಧೀನವಾಗಿವೆ ಎಂದು ಸಂತೋಷಪಡದೆ ನಮ್ಮ ಹೆಸರುಗಳು ಪರಲೋಕದಲ್ಲಿ ಬರೆದಿರುತ್ತವೆ ಎಂದು ಸಂತೋಷಪಡಿರಿ.'' ಲೂಕ 10:20

18. ''ದೇವರ ಕಡೆಗೆ ತಿರಿಗಿಕೊಳ್ಳುವ ಒಬ್ಬ ಪಾಪಿಯ ವಿಷಯವಾಗಿ ಪರಲೋಕದಲ್ಲಿ ಸಂತೋಷವುಂಟಾಗುವ ದೆಂದು ನಿಮಗೆ ಹೇಳುತ್ತೇನೆ.'' ಲೂಕ 15:7

19. ''ನಿಮ್ಮ ಬೆಳಕು ಜನರ ಮುಂದೆ ಪ್ರಕಾಶಿಸಲಿ ಹೀಗಾದರೆ ಅವರು ನಿಮ್ಮ ಒಳ್ಳೇ ಕ್ರಿಯೆಗಳನ್ನು ನೋಡಿ ಪರಲೋಕದಲ್ಲಿರುವ ನಿಮ್ಮ ತಂದೆಯನ್ನು ಕೊಂಡಾಡುವರು.'' ಮತ್ತಾ.5:16

20. ''ಪರಲೋಕದಲ್ಲಿರುವ ನಮ್ಮ ತಂದೆಯೇ ನಿನ್ನ ನಾಮವು ಪರಿಶುದ್ಧವೆಂದು ಎಣಿಸಲ್ಪಡಲಿ.'' ಮತ್ತಾ.6:10

## 22. ನಿತ್ಯ ಜೀವ

1. ''ದೇವರು ಲೋಕದ ಮೇಲೆ ಎಷ್ಟೋ ಪ್ರೀತಿಯನ್ನಿಟ್ಟು ತನ್ನ

ಒಬ್ಬನೇ ಮಗನನ್ನು ಕೊಟ್ಟನು. ಆತನನ್ನು ನಂಬುವ ಒಬ್ಬನಾದರೂ ನಾಶವಾಗದೆ ಎಲ್ಲರೂ ನಿತ್ಯಜೀವವನ್ನು ಪಡೆಯಬೇಕೆಂದು ಆತನನ್ನು ಕೊಟ್ಟನು.'' ಯೋಹಾ.3:1

2. ''ನಿಮಗೆ ನಿಜ ನಿಜವಾಗಿ ಹೇಳುತ್ತೇನೆ, ನನ್ನ ವಾಕ್ಯವನ್ನು ಕೇಳಿ ನನ್ನನ್ನು ಕಳುಹಿಸಿದಾತನನ್ನು ನಂಬುವವನು ನಿತ್ಯಜೀವವನ್ನು ಹೊಂದಿದ್ದಾನೆ.'' ಯೋಹಾ.5:24

3. ''ಒಳ್ಳೇ ಬೋಧಕನೇ, ನಾನು ನಿತ್ಯ ಜೀವಕ್ಕೆ ಬಾಧ್ಯಸ್ಥನಾ ಬೇಕಾದರೆ ಏನು ಮಾಡಬೇಕು.'' ಮಾರ್ಕ 10:17

4. ''ಮಗನನ್ನು ನೋಡಿ ಆತನನ್ನು ನಂಬುವ ಪ್ರತಿಯೊಬ್ಬನಿಗೆ ನಿತ್ಯಜೀವವು ಸಿಕ್ಕಬೇಕೆಂಬದೇ ನನ್ನ ತಂದೆಯ ಚಿತ್ತವಾಗಿದೆ.'' ಯೋಹಾ.6:40

5. ''ಕೆಟ್ಟು ಹೋಗುವ ಆಹಾರಕ್ಕಾಗಿ ದುಡಿಯಬೇಡಿರಿ, ನಿತ್ಯಜೀವಕ್ಕೆ ಉಳಿಯುವ ಆಹಾರಕ್ಕಾಗಿ ದುಡಿಯಿರಿ.'' ಯೋಹಾ.6:27

6. ''ಶಾಸ್ತ್ರಗಳಿಂದ ನಿತ್ಯಜೀವವು ದೊರೆಯುತ್ತದೆಂದು ನೀವು ನೆನಸಿ ಅವುಗಳನ್ನು ವಿಚಾರಿಸುತ್ತೀರಲ್ಲಾ; ಅವುಗಳು ನನ್ನ ವಿಷಯದಲಿ ಸಾಕ್ಷಿ ಕೊಡುತ್ತದೆ.'' ಯೋಹಾ.5:39

7. ''ನಾನು ಕೊಡುವ ನೀರು ಅವನಲ್ಲಿ ಉಕ್ಕುವ ಒರತೆ ಯಾಗಿದ್ದು ನಿತ್ಯಜೀವವನ್ನು ಉಂಟು ಮಾಡುವದು.'' ಯೋಹಾ.4:14

8. ''ನನ್ನ ಮಾಂಸವನ್ನು ತಿಂದು ನನ್ನ ರಕ್ತವನ್ನು ಕುಡಿಯು

ವವನು ನಿತ್ಯಜೀವವನ್ನು ಹೊಂದಿದ್ದಾನೆ.'' ಯೋಹಾ.6:54

9. ''ಮನುಷ್ಯಕುಮಾರನು ತನ್ನನ್ನು ನಂಬುವವರೆಲ್ಲರೂ ನಿತ್ಯಜೀವವನ್ನು ಪಡೆಯಬೇಕೆಂದು ಎತ್ತರ ದಲ್ಲಿಡಲ್ಪಡಬೇಕು.'' ಯೋಹಾ.3:15

10. ''ನನ್ನನ್ನು ನಂಬಿರುವವನು ನಿತ್ಯಜೀವವನ್ನು ಹೊಂದಿ ದ್ದಾನೆಂದು ನಿಮಗೆ ನಿಜ ನಿಜವಾಗಿ ಹೇಳುತ್ತೇನೆ.'' ಯೋಹಾ.6:47

11. ''ಆತನ ಮಗನನ್ನು ನಂಬುವವನಿಗೆ ನಿತ್ಯಜೀವವುಂಟು; ಮಗನಿಗೆ ಒಳಗಾಗದವನು ಜೀವವನ್ನು ಕಾಣುವದೇ ಇಲ್ಲ.'' ಯೋಹಾ.3:36

12. ''ನಾನು ಅವುಗಳಿಗೆ ನಿತ್ಯಜೀವವನ್ನು ಕೊಡುತ್ತೇನೆ; ಅವು ಎಂದಿಗೂ ನಾಶವಾಗುವದೇ ಇಲ್ಲ.'' ಯೋಹಾ.10:28

13. ''ನನ್ನ ಆಜ್ಞೆಯು ನಿತ್ಯ ಜೀವವಾಗಿದೆ ಎಂದು ಬಲ್ಲೆನು.'' ಯೋಹಾ.12:50

14. ''ನೀನು ಅವನಿಗ ಯಾರ್ಯಾರನ್ನು ಕೊಟ್ಟಿದ್ದೀಯೋ ಅವರೆಲ್ಲರಿಗೆ ಅವನು ನಿತ್ಯಜೀವವನ್ನು ಕೊಡಬೇಕೆಂದು ಅವನಿಗೆ ಎಲ್ಲಾ ಮನುಷ್ಯರ ಮೇಲೆ ಅಧಿಕಾರವನ್ನು ಕೊಟ್ಟಿಯಲ್ಲಾ.'' ಯೋಹಾ.17:2

15. ''ಒಬ್ಬನೇ ಸತ್ಯದೇವರಾಗಿರುವ ನಿನ್ನನ್ನೂ ನೀನು ಕಳುಹಿಸಿಕೊಟ್ಟ ಯೇಸು ಕ್ರಿಸ್ತನನ್ನು ತಿಳಿಯುವದೇ ನಿತ್ಯಜೀವವು.'' ಯೋಹಾ.17:3

16. "ನನ್ನ ಹೆಸರಿನ ನಿಮಿತ್ತ ಮನೆಗಳನ್ನಾಗಲಿ ತಂದೆಯನ್ನಾಗಲಿ ತಾಯಿಯನ್ನಾಗಲಿ ಮಕ್ಕಳನ್ನಾಗಲಿ ಭೂಮಿಯನ್ನಾಗಲಿ ಬಿಟ್ಟು ಬಿಟ್ಟಿರುವವರೆಲ್ಲರಿಗೆ ಅನೇಕ ಪಾಲು ಹೆಚ್ಚಾಗಿ ಸಿಕ್ಕುವದು ಮತ್ತು ಅವರು ನಿತ್ಯಜೀವಕ್ಕೆ ಬಾಧ್ಯರಾಗುವರು." ಮತ್ತಾ.19:29

17. "ಇವರು ನಿತ್ಯ ಶಿಕ್ಷೆಗೂ ನೀತಿವಂತರು ನಿತ್ಯಜೀವಕ್ಕೂ ಹೋಗುವರು." ಮತ್ತಾ.25:46

18. "ನನ್ನನ್ನು ನಂಬಿದವನ ಹೊಟ್ಟೆಯೊಳಗಿಂದ ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಜೀವಕರವಾದ ನೀರಿನ ಹೊಳೆಗಳು ಹರಿಯುವವು." ಯೋಹಾ.7:38

19. "ನಿತ್ಯಜೀವಕ್ಕೆ ಹೋಗುವ ಬಾಗಿಲು ಇಕ್ಕಟ್ಟು, ದಾರಿ ಬಿಕ್ಕಟ್ಟು; ಅದನ್ನು ಕಂಡು ಹಿಡಿಯುವವರು ಸ್ವಲ್ಪ ಜನ." ಮತ್ತಾ.7:14

20. "ದೇವರು ಕೊಡುವ ಆ ರೊಟ್ಟಿ ಯಾವದೆಂದರೆ ಪರಲೋಕದಿಂದ ಇಳಿದು ಬಂದು ಲೋಕಕ್ಕೆ ಜೀವವನ್ನುಂಟು ಮಾಡುವಂಥದೇ." ಯೋಹಾ.6:33

## 23. ಆತ್ಮೀಕ ಕುರುಡುತನ.

1. "ನಿನ್ನ ಕಣ್ಣು ಕೆಟ್ಟದ್ದಾಗಿದ್ದರೆ ನಿನ್ನ ದೇಹವೆಲ್ಲಾ ಕತ್ತಲಾಗಿರುವದು. ಹಾಗಾದರೆ ನಿನ್ನೊಳಗಿರುವ ಬೆಳಕೇ ಕತ್ತಲಾದರೆ ಆ ಕತ್ತಲು ಎಷ್ಟೆನ್ನಬೇಕು." ಮತ್ತಾ.6:23

2. "ವಾಕ್ಯವನ್ನು ಕೇಳಿ ತಿಳುಕೊಳ್ಳದೆ ಇರುವಲ್ಲಿ ಸೈತಾನನು

ಬಂದು ಆ ಮನುಷ್ಯನ ಮನಸ್ಸಿನಲ್ಲಿ ಬಿತ್ತಿದ್ದನು ತೆಗೆದು ಹಾಕುತ್ತಾನೆ; ಈ ಮನುಷ್ಯನೇ ಬೀಜ ಬಿದ್ದ ದಾರಿಯ ಮಗ್ಗುಲಾಗಿರುವನು.'' ಮತ್ತಾ.13:19

3. ''ತಾವೇ ಕುರುಡರು, ಮತ್ತೊಬ್ಬರಿಗೆ ದಾರಿ ತೋರಿಸುವದಕ್ಕೆ ಹೋಗುತ್ತಾರೆ; ಕುರುಡನು ಕುರುಡರಿಗೆ ದಾರಿ ತೋರಿಸಿದರೆ ಅವರಿಬ್ಬರೂ ಕುಣಿಯಲ್ಲಿ ಬೀಳುವರು.'' ಮತ್ತಾ.15:14

4. ''ಭೂಮ್ಯಾಕಾಶಗಳ ಭಾವವನ್ನು ಶೋಧಿಸುವದಕ್ಕೆ ನಿಮಗೆ ಗೊತ್ತಿರುವಲ್ಲಿ ಆ ಸಮಯವನ್ನು ಶೋಧಿಸುವದಕ್ಕೆ ನಿಮಗೆ ಯಾಕೆ ಗೊತ್ತಿಲ್ಲ?'' ಲೂಕ 12:56

5. ''ನೀವು ಶಾಸ್ತ್ರವನ್ನಾದರೂ ದೇವರ ಶಕ್ತಿಯನ್ನಾದರೂ ತಿಳಿಯದೆ ತಪ್ಪುವವರಾಗಿದ್ದೀರಿ.'' ಮತ್ತಾ.22:29

6. ''ಕೈಸರನದನ್ನು ಕೈಸರನಿಗೆ ಕೊಡಿರಿ; ದೇವರದನ್ನು ದೇವರಿಗೆ ಕೊಡಿರಿ.'' ಮತ್ತಾ.22:21

7. ''ಒಳ್ಳೇದು, ನೀವು ನಿಮ್ಮ ಹಿರಿಯರ ಪಾಪದ ಅಳತೆಯನ್ನು ಪೂರ್ತಿ ಮಾಡಿರಿ; ಹಾವುಗಳೇ ಸರ್ಪಜಾತಿಯವರೇ ನರಕ ದಂಡನೆಗೆ ಹೇಗೆ ತಪ್ಪಿಸಿಕೊಂಡಿರಿ.'' ಮತ್ತಾ.23:32,33

8. ''ಸಿಲೋವಾಮಿನಲ್ಲಿ ಬುರುಜು ಬಿದ್ದು ಸತ್ತ ಆ ಹದಿನೆಂಟು ಮಂದಿಯು ಯೆರೂಸಲೇಮಿನಲ್ಲಿ ವಾಸವಾಗಿರುವ ಎಲ್ಲಾ ಮನುಷ್ಯರಿಗಿಂತಲೂ ಅಪರಾಧಿಗಳೆಂದು ಭಾವಿಸುತ್ತೀರೋ? ಹಾಗಲ್ಲವೆಂದು ನಿಮಗೆ ಹೇಳುತ್ತೇನೆ.'' ಲೂಕ13:4

9. ''ಬುದ್ಧಿಯಿಲ್ಲದವರೇ, ಹೊರಭಾಗವನ್ನು ಮಾಡಿದಾತನು

ಒಳಭಾಗವನ್ನೂ ಮಾಡಿದನಲ್ಲವೇ? ಹೇಗೂ ಒಳಗಿರುವಂಥದನ್ನು ದಾನಕೊಡಿರಿ; ಅಗ ಸಕಲವೂ ನಿಮಗೆ ಶುದ್ಧವಾಗಿರುವದು.'' ಲೂಕ 11:41

10. ''ಧರ್ಮೋಪದೇಶಕರೇ ನಿಮ್ಮ ಗತಿಯನ್ನು ಏನು ಹೇಳಲಿ? ನೀವು ಜನರ ಮೇಲೆ ಹೊರಲಾರದ ಹೊರೆಯನ್ನು ಹೊರಿಸುತ್ತೀರಿ; ನೀವಾದರೋ ಆ ಹೊರೆಗಳನ್ನು ಒಂದು ಬೆರಳಿನಿಂದಲೂ ಮುಟ್ಟುವದಿಲ್ಲ'' ಲೂಕ 11:46

11. ''ನೀನಾದರೂ ಸಮಾಧಾನಕ್ಕೆ ಬೇಕಾದದ್ದನ್ನು ಇದೇ ದಿನದಲ್ಲಿ ತಿಳುಕೊಂಡರೆ ಎಷ್ಟೊ ಒಳ್ಳೇದು. ಆದರೆ ಈಗ ಅದು ನಿನ್ನ ಕಣ್ಣಿಗೆ ಮರೆಯಗಿದೆ'' ಲೂಕ 19:42

12: ''ನನ್ನ ಆಲಯವು ಪ್ರಾರ್ಥನಾಲಯವಾಗಿರುವದು ಎಂದು ಬರೆದಿದೆಯಲ್ಲಾ; ಆದರೆ ನೀವು ಅದನ್ನು ಕಳ್ಳರ ಗವಿ ಮಾಡಿದ್ದೀರಿ'' ಲೂಕ 19:46

13. ''ಎರಡು ಕಣ್ಣುಳ್ಳವನಾಗಿದ್ದು ನರಕದಲ್ಲಿ ಹಾಕಿಸಿಕೊಳ್ಳುವದಕ್ಕಿಂತ ಒಂದೆ ಕಣ್ಣುಳ್ಳವನಾಗಿದ್ದು ದೇವರ ರಾಜ್ಯದಲ್ಲಿ ಸೇರುವದು ನಿನಗೆ ಉತ್ತಮ'' ಮಾರ್ಕ 9:47.

14. ''ನಿನಗೆ ಒಂದು ಕಡಿಮೆಯಾಗಿದೆ; ಹೋಗು ನಿನ್ನ ಬದುಕನ್ನೆಲ್ಲಾ ಮಾರಿ ಬಡವರಿಗೆ ಕೊಡು. ನೀನು ಬಂದು ನನ್ನನ್ನು ಹಿಂಬಾಲಿಸು ಎಂದು ಹೇಳಿದನು'' ಮಾರ್ಕ 10:21

15. ''ಅವನು ಬಹಳ ಆಸ್ತಿವುಳ್ಳವನಾಗಿದ್ದದರಿಂದ ಈ ಮಾತಿಗೆ ಮೋರೆ ಬಾಡಿದವನಾಗಿ ದುಃಖದಿಂದ ಹೊರಟು

ಹೋದನು.'' ಮಾರ್ಕ 10:22

16. ''ತಂದೆಯೇ, ಅವರಿಗೆ ಕ್ಷಮಿಸು; ತಾವು ಏನು
ಮಾಡುತ್ತೇವೆಂಬದನ್ನು ಅರಿಯರು.'' ಲೂಕ 23:34

17. ''ನೀವು ಹೊಸದಾಗಿ ಹುಟ್ಟಬೇಕು ಎಂದು ನಾನು ನಿನಗೆ
ಹೇಳಿದ್ದರಿಂದ ಆಶ್ಚರ್ಯಪಡಬೇಡ.'' ಯೋಹಾ 3:7

18. ''ನಾನು ಭೂಲೋಕದಲ್ಲಿ ನಡೆಯುವ ಕಾರ್ಯಗಳನ್ನು
ಕುರಿತು ನಿಮಗೆ ಹೇಳುವಾಗ ನೀವು ನಂಬದೆ ಹೋದರೆ
ಪರಲೋಕದ ಕಾರ್ಯಗಳನ್ನು ಕುರಿತು ನಿಮಗೆ ಹೇಳಿದರೆ
ಹೇಗೆ ನಂಬೀರಿ.'' ಯೋಹಾ 3:12

19. ''ಯೇಸು ಅವರಿಗೆ ನೀವು ಕುರುಡರಾಗಿದ್ದರೆ ನಿಮಗೆ ಪಾಪವು
ಇರುತ್ತಿರಲಿಲ್ಲ. ನಮಗೆ ಕಣ್ಣು ಕಾಣುತ್ತದೆ ಅನ್ನುತೀರಾ
ದ್ದರಿಂದ ನಿಮ್ಮ ಪಾಪವು ಉಳಿದದೆ'' ಯೋಹಾ 9:41

20. '' ಆತನು ಜೀವಿತರಿಗೆ ದೇವರಾಗಿದ್ದಾನೆ ಹೊರತು
ಜೀವವಿಲ್ಲದವರಿಗೆ ಅಲ್ಲ; ನೀವು ಹಿಡಿದ ಅಭಿಪ್ರಾಯವು
ಬಹು ತಪ್ಪಾಗಿದೆ.'' ಮಾರ್ಕ 12:27.

## 24. ತಿರಸ್ಕಾರ

1. ''ಒಬ್ಬ ಮನೆಯ ಯಜಮಾನನಿದ್ದನು. ಅವನು ಒಂದು
ದ್ರಾಕ್ಷೇ ತೋಟವನ್ನು ಮಾಡಿ, ಅದರ ಸುತ್ತಲೂ ಬೇಲಿ
ಹಾಕಿಸಿ, ಅದರಲ್ಲಿ ದ್ರಾಕ್ಷೆಯ ಆಲೆಯನ್ನು ಮಾಡಿಸಿ
ಹೊಡೆಯನ್ನು ಕಟ್ಟಿಸಿ ಒಕ್ಕಲಿಗರಿಗೆ ವಾರಕ್ಕೆ ಕೊಟ್ಟು
ಬೇರೊಂದು ದೇಶಕ್ಕೆ ಹೋದನು.'' ಮತ್ತಾ.21:33

2. ''ಫಲಕಾಲ ಹತ್ತಿರವಾದಾಗ ತನಗೆ ಬರಬೇಕಾದ ಹಣ್ಣುಗಳನ್ನು ತೆಗೆದುಕೊಂಡು ಬರುವದಕ್ಕಾಗಿ ಆ ಒಕ್ಕಲಿಗರ ಬಳಿಗೆ ತನ್ನ ಆಳುಗಳನ್ನು ಕಳುಹಿಸಿದನು.'' ಮತ್ತಾ.21:34

3. ''ಒಕ್ಕಲಿಗರು ಅವನ ಆಳುಗಳನ್ನು ಹಿಡುಕೊಂಡು ಒಬ್ಬನನ್ನು ಹೊಡೆದರು. ಒಬ್ಬನನ್ನು ಕಡಿದು ಹಾಕಿದರು. ಒಬ್ಬನನ್ನು ಕಲ್ಲೆಸೆದುಕೊಂದರು.'' ಮತ್ತಾ.21:35

4. ''ಕಡೆಯಲ್ಲಿ ತನ್ನ ಮಗನಿಗಾದರೂ ಮರ್ಯಾದೆ ತೋರಿಸಾರು ಅಂದುಕೊಂಡು ತನ್ನ ಮಗನನ್ನು ಅವರ ಬಳಿಗೆ ಕಳುಹಿಸಿದನು.'' ಮತ್ತಾ.21:37

5. ''ಒಕ್ಕಲಿಗರು ಅವನ ಮಗನನ್ನು ಕಂಡು - ಇವನೇ ಬಾಧ್ಯಸ್ಥನು. ಬನ್ನಿ ಇವನನ್ನು ಕೊಂದು ಹಾಕೋಣ. ಇವನ ಸ್ವಾಸ್ಥ್ಯವನ್ನು ನಾವೇ ತೆಗೆದುಕೊಳ್ಳೋಣ ಎಂದು ತಮ್ಮೊಳಗೆ ಮಾತಾಡಿಕೊಂಡರು.'' ಮತ್ತಾ.21:38

6. ''ಅವನನ್ನು ಹಿಡಿದು ದ್ರಾಕ್ಷೆ ತೋಟದಿಂದ ಹೊರಗೆ ದೊಬ್ಬಿ ಕೊಂದು ಹಾಕಿದರು.'' ಮತ್ತಾ.21:39

7. ''ಮನೆ ಕಟ್ಟುವವರು ಬೇಡವೆಂದು ಬಿಟ್ಟ ಕಲ್ಲೇ ಮುಖ್ಯವಾದ ಮೂಲೆಗಲ್ಲಾಯಿತು; ಇದು ಕರ್ತನಿಂದಲೇ ಆಯಿತು.'' ಮತ್ತಾ.21:42

8. ''ಮದುವೆಗೆ ಸಿದ್ಧವಾಗಿದೆ ಸರಿ, ಆದರೆ ಕರೆಯಲ್ಪಟ್ಟವರು ಯೋಗ್ಯರಾಗಿರಲಿಲ್ಲ.'' ಮತ್ತಾ.22:8

9. ''ಯೆರೂಸಲೇಮೇ, ಯೆರೂಸಲೇಮೇ, ಪ್ರವಾದಿಗಳ ಪ್ರಾಣ

ತೆಗೆಯುವವಳೇ,; ದೇವರು ನಿನ್ನ ಬಳಿಗೆ ಕಳುಹಿಸಿ ಕೊಟ್ಟ
ವರನ್ನು ಕಲ್ಲೆಸೆದು ಕೊಲ್ಲುವವಳೇ ಕೋಳಿ ತನ್ನ ಮರಿಗಳನ್ನು
ರೆಕ್ಕೆಗಳ ಕೆಳಗೆ ಕೂಡಿಸಿಕೊಳ್ಳುವಂತೆ ನಿನ್ನ ಮಕ್ಕಳನ್ನು
ಕೂಡಿಸಿಕೊಳ್ಳುವದಕ್ಕೆ ನನಗೆ ಎಷ್ಟೋ ಸಾರಿ ಮನಸ್ಸಿತ್ತು;
ಆದರೆ ನಿಮಗೆ ಮನಸ್ಸಿಲ್ಲದೆ ಹೋಯಿತು.'' ಮತ್ತಾ.23:37

10. ''ದೇವರ ರಾಜ್ಯವು ನಿಮ್ಮಿಂದ ತೆಗೆಯಲ್ಪಟ್ಟು ಅದರ ಫಲಗಳನ್ನು ಕೊಡುವ ಜನಕ್ಕೆ ಕೊಡಲಾಗುವದು.'' ಮತ್ತಾ.21:42

11. ''ನರಿಗಳಿಗೆ ಗುದ್ದುಗಳಿವೆ, ಆಕಾಶದಲ್ಲಿ ಹಾರಾಡುವ ಹಕ್ಕಿಗಳಿಗೆ ಗೂಡುಗಳಿವೆ; ಆದರೆ ಮನುಷ್ಯ ಕುಮಾರನಿಗೆ ತಲೆಯಿಡುವಷ್ಟು ಸ್ಥಳವೂ ಇಲ್ಲ.'' ಮತ್ತಾ.8:20

12. ''ಮನುಷ್ಯಕುಮಾರನು ಬಹು ಕಷ್ಟಗಳನ್ನನುಭವಿಸಿ ಹಿರಿಯರಿಂದಲೂ ಮಹಾಯಾಜಕರಿಂದಲೂ ಶಾಸ್ತ್ರಿಗಳಿಂದಲೂ ನಿರಾಕೃತನಾಗಿ ಕೊಲ್ಲಲ್ಪಟ್ಟು ಮೂರು ದಿನದ ಮೇಲೆ ಜೀವಿತನಾಗಿ ಎದ್ದು ಬರಬೇಕಾಗಿದೆ.'' ಮತ್ತಾ.8:34

13. ''ನನ್ನ ಹೆಸರಿನ ನಿಮಿತ್ತ ನಿಮ್ಮನ್ನು ಎಲ್ಲರೂ ಹಗೆ ಮಾಡುವರು. ಆದರೆ ಕಡೆವರೆಗೂ ತಾಳುವವನು ರಕ್ಷಣೆ ಹೊಂದುವವನು.'' ಮತ್ತಾ.10:22

14. ''ಇವನಿಗೆ ಈ ಜ್ಞಾನವೂ ಈ ಮಹತ್ಕಾರ್ಯವೂ ಎಲ್ಲಿಂದ ಬಂದಿದ್ದಾವು? ಇವನು ಆ ಬಡಗಿಯ ಮಗನಲ್ಲವೇ? ಇವನ ತಾಯಿ ಮರಿಯಳೆಂಬವಳಲ್ಲವೇ.'' ಮತ್ತಾ.13:55

15. ''ಪ್ರವಾದಿಯು ಬೇರೆ ಎಲ್ಲಿದ್ದರೂ ಅವನಿಗೆ ಮರ್ಯಾದೆ ಉಂಟು; ಆದರೆ ಸ್ವದೇಶದಲ್ಲಿಯೂ ಸ್ವಂತ ಮನೆಯಲ್ಲಿಯೂ ಮಾತ್ರ ಮರ್ಯಾದೆ ಇಲ್ಲ ಅಂದನು.'' ಮತ್ತಾ.13:57

16. ''ಯಾವ ಸ್ಥಳದವರಾದರೂ ನಿಮ್ಮನ್ನು ಸೇರಿಸಿಕೊಳ್ಳದೆಯೂ ನೀವು ಹೇಳುವದನ್ನು ಕೇಳದೆಯೂ ಹೋದರೆ ಆ ಸ್ಥಳದಿಂದ ಹೊರಟು ಹೋಗುವಾಗ ನಿಮ್ಮ ಕಾಲಿಗೆ ಹತ್ತಿದ ಧೂಳನ್ನು ಝಾಡಿಸಿಬಿಡಿರಿ.'' ಮಾರ್ಕ 6:11

17. ''ಮನೆಯ ಯಜಮಾನನು ಎದ್ದು ಕದಾ ಹಾಕಿಕೊಂಡ ಮೇಲೆ ನೀವು ಹೊರಗೆ ನಿಂತುಕೊಂಡು ಕದ ತಟ್ಟಿ- ಸ್ವಾಮೀ, ನಮಗೆ ತೆರೆಯಿರಿ ಎಂದು ಹೇಳುವದಕ್ಕೆ ತೊಡಗುವಾಗ ಅವನು, ನೀವು ಎಲ್ಲಿಯವರೋ? ನಿಮ್ಮ ಗುರುತು ನನಗಿಲ್ಲ;'' ಲೂಕ 13:25

18. ''ನೀವು ಎಲ್ಲಿಯವರೋ ನಿಮ್ಮ ಗುರುತು ನನಗಿಲ್ಲ; ಅಧರ್ಮ ಮಾಡುವ ನೀವೆಲ್ಲರೂ ನನ್ನ ಕಡೆಯಿಂದ ಹೊರಟು ಹೋಗಿರಿ ಎಂದು ನಿಮಗೆ ಹೇಳುತ್ತೇನೆ.'' ಲೂಕ.13:27

19. ''ಆತನನ್ನು ನಂಬುವವನಿಗೆ ತೀರ್ಪು ಆಗುವದಿಲ್ಲ; ಆದರೆ ನಂಬದವನಿಗೆ ದೇವರ ಒಬ್ಬನೇ ಮಗನ ಹೆಸರನ್ನು ನಂಬದೆ ಹೋದದರಿಂದ ಆಗಲೇ ತೀರ್ಪು ಆಗಿ ಹೋಯಿತು.'' ಯೋಹಾ.3:18

20. ''ನನಗಾಗಿ ಪ್ರಾಣ ಕೊಟ್ಟೀಯಾ? ನಿನಗೆ ನಿಜ ನಿಜವಾಗಿ

ಹೇಳುತ್ತೇನೆ, ನೀನು ನನ್ನ ವಿಷಯದಲ್ಲಿ ಅವನನ್ನು ಅರಿಯೆ
ನೆಂದು ಮೂರು ಸಾರಿ ಹೇಳುವ ತನಕ ಕೋಳಿ ಕೂಗುವದೇ
ಇಲ್ಲ." ಯೋಹಾ.13:38

## 25. ಪಾಪದ ಫಲ

1. "ನರಹತ್ಯ ಮಾಡಬಾರದು, ನರಹತ್ಯ ಮಾಡುವವನು ನ್ಯಾಯವಿಚಾರಣೆಗೆ ಗುರಿಯಾಗುವನೆಂದು ಹಿರಿಯರಿಗೆ ಹೇಳಿಯದೆ ಎಂದು ಕೇಳಿದ್ದೀರಷ್ಟೆ." ಮತ್ತಾ.5:21
2. "ನನ್ನ ಸಹೋದರರನ ಮೇಲೆ ಸಿಟ್ಟುಗೊಳ್ಳುವ ಪ್ರತಿ ಮನುಷ್ಯನು ನ್ಯಾಯವಿಚಾರಣೆಗೆ ಗುರಿಯಾಗುವನು." ಮತ್ತಾ.5:22
3. "ನಿನ್ನ ಬಲಗಣ್ಣು ನಿನ್ನನ್ನು ಪಾಪದಲ್ಲಿ ಸಿಕ್ಕಿಸುವದಾದರೆ ಅದನ್ನು ಕಿತ್ತು ಬಿಸಾಟುಬಿಡು ನಿನ್ನ ದೇಹವೆಲ್ಲಾ ನರಕದಲ್ಲಿ ಬೀಳುವದಕ್ಕಿಂತ ಅವಯುವಗಳಲ್ಲಿ ಒಂದು ಹೋಗುವದು ನಿನಗೆ  ಹಿತವಲ್ಲವೇ?" ಮತ್ತಾ5:29
4. "ನಿಮ್ಮ ಮಾತು ಹೌದಾದರೆ ಹೌದು ಅಲ್ಲವಾದರೆ ಅಲ್ಲ ಎಂದಿರಲಿ; ಇದಕ್ಕಿಂತ ಹೆಚ್ಚಾದದ್ದು ಸೈತಾನನಿಂದ ಬಂದದ್ದು." ಮತ್ತಾ.5:37
5. "ಪರಲೋಕದಲ್ಲಿರುವ ನನ್ನ ತಂದೆಯು ನೆಡದೆ ಇರುವ ಗಿಡಗಳೆಲ್ಲಾ ಬೇರಿನೊಂದಿಗೆ ಕಿತ್ತು ಹಾಕಲ್ಪಡುವವು." ಮತ್ತಾ.15:13
6. "ತೊಡಕುಗಳು ಬರುವದರಿಂದ ಲೋಕಕ್ಕೆ ಎಷ್ಟೋ ಕೇಡು!

ತೊಡಕುಗಳು ಹೇಗಾದರೂ ಬರುವವು. ಆದಾಗ್ಯೂ ಯಾವ ಮನುಷ್ಯನಿಂದ ತೊಡಕು ಬರುತ್ತದೋ ಅವನ ಗತಿಯನ್ನು ಏನು ಹೇಳಲಿ.'' ಮತ್ತಾ.18:7

7. ''ನೀವು ನಿಮ್ಮ ಹಿರಿಯರ ಪಾಪದ ಅಳತೆಯನ್ನು ಪೂರ್ತಿ ಮಾಡಿರಿ. ಹಾವುಗಳೇ, ಸರ್ಪಜಾತಿಯವರೇ, ನರಕ ದಂಡನೆಗೆ ಹೇಗೆ ತಪ್ಪಿಸಿಕೊಂಡೀರಿ?'' ಮತ್ತಾ.23:33

8. ''ನೀವು ಯಾರಿಗೆ ಹೆದರಬೇಕೋ ನಿಮಗೆ ತಿಳಿಸುತ್ತೇನೆ. ಕೊಂದ ಮೇಲೆ ನರಕದೊಳಗೆ ಹಾಕುವ ಅಧಿಕಾರವುಳ್ಳವರಿಗೆ ಹೆದರಬೇಕು.'' ಲೂಕ 12:5

9. ''ಈ ಚಿಕ್ಕವರಲ್ಲಿ ಒಬ್ಬನಿಗೆ ತೊಡಕನ್ನೊಡ್ಡುವದಕ್ಕಿಂತ ತನ್ನ ಕುತ್ತಿಗೆಗೆ ಬೀಸುವ ಕಲ್ಲನ್ನು ಕಟ್ಟಿಸಿಕೊಂಡು ಸಮುದ್ರದಲ್ಲಿ ಹಾಕಿಸಿಕೊಳ್ಳುವದೇ ಲೇಸು.'' ಲೂಕ 17:2

10. ''ತಮ್ಮ ಮೇಲೆ ನಾನು ದೊರೆತನ ಮಾಡುವದು ಇಷ್ಟವಿಲ್ಲವೆಂದು ಹೇಳಿದ ಆ ನನ್ನ ವೈರಿಗಳನ್ನು ಇಲ್ಲಿಗೆ ತಂದು ನನ್ನ ಮುಂದೆ ಸಂಹಾರ ಮಾಡಬೇಕು.'' ಲೂಕ 19:27

11. ''ಈ ಕಲ್ಲಿನ ಮೇಲೆ ಬೀಳುವ ಪ್ರತಿಯೊಬ್ಬನು ತುಂಡು ತುಂಡಾಗುವನು; ಇದು ಯಾರ ಮೇಲೆ ಬೀಳುವದೋ ಅವನನ್ನು ಪುಡಿ ಪುಡಿ ಮಾಡುವನು.'' ಲೂಕ 20:18

12. ''ಒಳ್ಳೇದನ್ನು ಮಾಡಿದವನಿಗೆ ಜೀವಕ್ಕಾಗಿ ಪುನರುತ್ಥಾನವಾಗುವದು; ಕೆಟ್ಟದ್ದನ್ನು ನಡಿಸಿದವನಿಗೆ ತೀರ್ಪಿಗಾಗಿ ಪುನರುತ್ಥಾನವಾಗುವದು.'' ಯೋಹಾ.5:29

13. "ನಿನಗೆ ಸ್ವಸ್ಥವಾಯಿತಲ್ಲಾ; ಇನ್ನು ಮೇಲೆ ಪಾಪ ಮಾಡಬೇಡ; ನಿನಗೆ ಹೆಚ್ಚಿನ ಕೇಡು ಬಂದೀತು." ಯೋಹಾ.5:14

14. "ನಾನು ತಂದೆಯ ಮುಂದೆ ನಿಮ್ಮ ಮೇಲೆ ತಪ್ಪು ಹೊರಿಸುವೆನೆಂದು ನೆನಸಬೇಡಿರಿ; ನೀವು ಆಶ್ರಯಿಸಿಕೊಂಡಿರುವ ಮೋಶೆಯೇ ನಿಮ್ಮ ಮೇಲೆ ತಪ್ಪು ಹೊರಿಸುವವನು." ಯೋಹಾ.5:45

15. "ಒಳ್ಳೇ ಫಲವನ್ನು ಕೊಡದ ಎಲ್ಲಾ ಮರಗಳನ್ನು ಕಡಿದು ಬೆಂಕಿಯಲ್ಲಿ ಹಾಕುತ್ತಾರೆ." ಮತ್ತಾ.7:19

16. "ನಾನೆಂದೂ ನಿಮ್ಮ ಗುರುತು ಕಾಣೆನು; ಧರ್ಮವನ್ನು ಮೀರಿ ನಡೆಯುವವರೇ ನನ್ನಿಂದ ತೊಲಗಿ ಹೋಗಿರಿ ಎಂದು ಎಲ್ಲರ ಮುಂದೆ ಹೇಳಿ ಬಿಡುವೆನು." ಮತ್ತಾ.7:23

17. "ಅಬ್ರಹಾಮ ಇಸಾಕ ಯಾಕೋಬ ಇವರು ಮತ್ತು ಎಲ್ಲಾ ಪ್ರವಾದಿಗಳು ದೇವರ ರಾಜ್ಯದಲ್ಲಿರುವದನ್ನೂ ನಿಮ್ಮನ್ನು ಮಾತ್ರ ಹೊರಗೆ ಹಾಕುವದನ್ನೂ ನೀವು ನೋಡುವಾಗ ನಿಮಗೆ ಗೋಳಾಟವು ಕಟಕಟನೆ ಹಲ್ಲು ಕಡಿಯೋಣವೂ ಇರುವವು." ಲೂಕ 13:28

18. "ಮನುಷ್ಯ ಕುಮಾರನು ತನ್ನ ದೂತರನ್ನು ಕಳುಹಿಸುವನು; ಅವರು ಆತನ ರಾಜ್ಯದೊಳಗಿಂದ ಎಲ್ಲಾ ಕಂಟಕರನ್ನೂ ಅಧರ್ಮಿಗಳನ್ನೂ ಕೂಡಿಸಿ ಬೆಂಕಿಕೊಂಡದಲ್ಲಿ ಹಾಕುವರು; ಅಲ್ಲಿ ಗೋಳಾಟವೂ ಹಲ್ಲು ಕಡಿಯೋಣವೂ ಇರುವವು." ಮತ್ತಾ.13:42,43

19. "ಕೆಲಸಕ್ಕೆ ಬರದ ಈ ಆಳನ್ನು ಹೊರಗೆ ಕತ್ತಲೆಗೆ ಹಾಕಿ ಬಿಡಿರಿ ಎಂದು ಹೇಳಿದನು." ಮತ್ತಾ.25:28

20. "ಮನುಷ್ಯ ಕುಮಾರನು ನೇಮಕವಾದ ಪ್ರಕಾರ ಹೊರಟು ಹೋಗುತ್ತಾನೆ ಸರಿ, ಆದರೆ ಅತನನ್ನು ಹಿಡಿದುಕೊಡುವ ಮನುಷ್ಯನ ಗತಿಯನ್ನು ಏನು ಹೇಳಲಿ." ಲೂಕ 22:22

## 26. ಪಾಪ ಪರಿಹಾರ

1. "ನಾನೂ ನಿನಗೆ ಶಿಕ್ಷೆ ವಿಧಿಸುವದಿಲ್ಲ; ಹೋಗು ಇನ್ನು ಮೇಲೆ ಪಾಪ ಮಾಡಬೇಡ." ಯೋಹ.8:11

2. "ಮಗನು ನಿಮ್ಮನ್ನು ಬಿಡುಗಡೆ ಮಾಡಿದರೆ ನಿಜವಾಗಿ ನಿಮಗೆ ಬಿಡುಗಡೆ ಆಗುವದು." ಯೋಹಾನ 8:36

3. "ನೀತಿವಂತರನ್ನು ಕರೆಯುವದಕ್ಕೆ ನಾನು ಬಂದವನಲ್ಲ, ಪಾಪಿಗಳನ್ನು ಕರೆಯುವದಕ್ಕೆ ಬಂದವನು." ಲೂಕ 5:32.

4. "ಯೇಸು ಅವನ ನಂಬಿಕೆಯನ್ನು ನೋಡಿ, ಪಾರ್ಶ್ವವಾಯು ರೋಗಿಗೆ - ಮಗನೆ ಧೈರ್ಯವಾಗಿರು, ನಿನ್ನ ಪಾಪಗಳು ಕ್ಷಮಿಸಲ್ಪಟ್ಟಿವೆ ಎಂದು ಹೇಳಿದನು." ಮತ್ತಾ.9:2

5. "ಪಾಪಗಳನ್ನು ಕ್ಷಮಿಸಿ ಬಿಡುವದಕ್ಕೆ ಮನುಷ್ಯ ಕುಮಾರನಿ ಭೂಲೋಕದಲ್ಲಿ ಅಧಿಕಾರ ಉಂಟೆಂದು ನಿಮಗೆ ತಿಳಿಯಬೇಕು." ಮತ್ತಾ.9:6

6. "ಇದು ನನ್ನ ರಕ್ತ. ಇದು ಒಡಂಬಡಿಕೆಯ ರಕ್ತ, ಇದು ಪಾಪಗಳ ಕ್ಷಮೆಗಾಗಿ ಬಹು ಜನರಿಗಾಗೋಸ್ಕರ

ಸುರಿಸಲ್ಪಡುವ ರಕ್ತ.'' ಮತ್ತಾ. 26:26.

7. ''ಆದಕಾರಣ ನಿಮಗೆ ಹೇಳುತ್ತೇನೆ. ಮನುಷ್ಯನು ಮಾಡುವ ಪ್ರತಿಯೊಂದು ಪಾಪಕ್ಕೂ ದೂಷಣೆಗೂ ಕ್ಷಮಾಪಣೆ ಉಂಟಾಗುವದು. ಆದರೆ ಪವಿತ್ರಾತ್ಮ ದೂಷಣೆಗೆ ಕ್ಷಮಾಪಣೆಯಿಲ್ಲ.'' ಮತ್ತಾಯ 12:31

8. ''ಇವಳ ಪಾಪಗಳು ಬಹಳವಾಗಿದ್ದರೂ ಅವು ಕ್ಷಮಿಸಲ್ಪಟ್ಟಿವೆ.'' ಲೂಕ 7:47

9. ''ಇದಕ್ಕೆ ಪ್ರಮಾಣವೇನೆಂದರೆ ಇವಳು ತೋರಿಸಿದ ಪ್ರೀತಿ ಬಹಳ; ಆದರೆ ಯಾವನಿಗೆ ಸ್ವಲ್ಪ ಮಾತ್ರ ಕ್ಷಮಿಸಲ್ಪಟ್ಟಿದೆಯೋ ಅವನು ತೋರಿಸುವ ಪ್ರೀತಿಯು ಸ್ವಲ್ಪವೇ ಅಂದನು.'' ಲೂಕ 7:47

10. ''ಅಪ್ಪಾ, ಪರಲೋಕಕ್ಕೆ ವಿರೋಧವಾಗಿಯೂ ನಿನ್ನ ಮುಂದೆಯೂ ಪಾಪ ಮಾಡಿದ್ದೇನೆ; ಇನ್ನು ನಾನು ನಿನ್ನ ಮಗನೆನಿಸಿಕೊಳ್ಳುವದಕ್ಕೆ ಯೋಗ್ಯನಲ್ಲ.'' ಲೂಕ 15:21

11. ''ನಾನು ನೀತಿವಂತರನ್ನು ಕರೆಯುವದಕ್ಕೆ ಬಂದವನಲ್ಲ. ಪಾಪಿಗಳನ್ನು ಕರೆಯುವದಕ್ಕೆ ಬಂದವನು ಅಂದನು.'' ಮತ್ತಾ.9:13

12. ''ಒಬ್ಬ ಪಾಪಿಯು ದೇವರ ಕಡೆಗೆ ತಿರಿಗಿಕೊಳ್ಳುವ ವಿಷಯದಲ್ಲಿ ದೇವದೂತರ ಮುಂದೆ ಸಂತೋಷವಾಗುವದು.'' ಲೂಕ 15:10

13. ''ಆ ಸುಂಕದವನು ದೂರದಲ್ಲಿ ನಿಂತು ಆಕಾಶದ ಕಡೆಗೆ

ಕಣ್ಣೆತ್ತಿ ನೋಡುವದಕ್ಕೂ ಮನಸ್ಸಿಲ್ಲದೆ ಎದೆಯನ್ನು ಬಡುಕೊಳ್ಳುತ್ತಾ - ದೇವರೇ, ಪಾಪಿಯಾದ ನನ್ನನ್ನು ಕರುಣಿಸು ಅಂದನು.'' ಲೂಕ 18:13

14. ''ಮನುಷ್ಯ ಕುಮಾರನು ಕೆಟ್ಟು ಹೋಗಿರುವದನ್ನು ಹುಡುಕಿ ರಕ್ಷಿಸುವದಕ್ಕೆ ಬಂದನು.'' ಲೂಕ 19:10

15. ''ಅಗೋ ಯಜ್ಞಕ್ಕೆ ದೇವರು ನೇಮಿಸಿದ ಕುರಿ. ಲೋಕದ ಪಾಪವನ್ನು ನಿವಾರಣೆ ಮಾಡುವದು.'' ಯೋಹಾ.1:29

16. ''ನಿನಗೆ ಸ್ವಸ್ಥವಾಯಿಲ್ಲಾ; ಇನ್ನು ಮೇಲೆ ಪಾಪ ಮಾಡಬೇಡ; ನಿನಗೆ ಹೆಚ್ಚಿನ ಕೇಡು ಬ್ಬಂದೀತು ಅಂದನು.'' ಯೋಹಾ.5:14

17. ''ನಿಮ್ಮಲ್ಲಿ ಪಾಪವಿಲ್ಲದವನು ಯಾರೋ ಅವನೇ ಮೊದಲು ಆಕೆಯ ಮೇಲೆ ಕಲ್ಲನ್ನು ಹಾಕಲಿ.'' ಯೋಹಾ.8:7

18. ''ನಾನು ಬಂದು ಅವರ ಕೂಡ ಮಾತಾಡದಿದ್ದರೆ ಅವರಿಗೆ ಪಾಪವು ಇರುತ್ತಿದ್ದಿಲ್ಲ; ಆದರೆ ಅವರು ಮಾಡಿದ ಪಾಪಕ್ಕಾಗಿ ಅವರಿಗೆ ಈಗ ನೆವವಿಲ್ಲ.'' ಯೋಹಾ.15:22

19. ''ಮತ್ತಾರೂ ನಡಿಸದ ಕ್ರಿಯೆಗಳನ್ನು ನಾನು ಅವರಲ್ಲಿ ನಡಿಸದೆ ಇದ್ದರೆ ಅವರಿಗೆ ಪಾಪವು ಇರುತ್ತಿದ್ದಿಲ್ಲ.'' ಯೋಹಾನ 15:24.

20. ''ನೀವು ಯಾರ ಪಾಪಗಳನ್ನು ಕ್ಷಮಿಸಿ ಬಿಡುತ್ತಿರೋ ಅವರಿಗೆ ಅವುಗಳ ಕ್ಷಮಾಪಣೆಯಗುತ್ತದೆ; ಯಾರ ಪಾಪಗಳನ್ನು ಕ್ಷಮಿಸದೆ ಉಳಿಸುತ್ತೀರೊ ಅವರಿಗೆ ಅವುಗಳು ಉಳಿಯುತ್ತದೆ.'' ಯೋಹಾ.20:23

## 27. ಪುನರ್ಜನ್ಮವೂ ನೆಲೆಗೊಳ್ಳುವಿಕೆಯೂ.

1. "ಒಬ್ಬನು ಹೊಸದಾಗಿ ಹುಟ್ಟದಿದ್ದರೆ ದೇವರ ರಾಜ್ಯವನ್ನು ಕಾಣಲಾರನು." ಯೋಹಾ.3:3
2. "ಒಬ್ಬನು ನೀರಿನಿಂದಲೂ ಆತ್ಮನಿಂದಲೂ ಹುಟ್ಟದಿದ್ದರೆ ದೇವರ ರಾಜ್ಯಕ್ಕೆ ಸೇರಲಾರನು." ಯೋಹಾ.3:3
3. "ದೇಹದಿಂದ ಹುಟ್ಟಿದ್ದು ದೇಹವೇ; ಆತ್ಮನಿಂದ ಹುಟ್ಟಿದ್ದು ಆತ್ಮವೇ." ಯೋಹಾ.3:5
4. "ನೀವು ಹೊಸದಾಗಿ ಹುಟ್ಟಬೇಕು ಎಂದು ನಾನು ನಿನಗೆ ಹೇಳಿದ್ದರಿಂದ ಆಶ್ಚರ್ಯಪಡಬೇಡ." ಯೋಹಾ.3:7
5. "ದೇವರು ವರವೇನೆಂಬದೂ ಕುಡಿಯುವದಕ್ಕೆ ನೀರು ಕೊಡು ಎಂದು ನಿನಗೆ ಹೇಳಿದವನು ಯಾರೆಂಬದೂ ನಿನಗೆ ತಿಳಿದಿದ್ದರೆ ನೀನು ಅವನನ್ನು ಬೇಡಿಕೊಳ್ಳುತ್ತಿದ್ದೀ. ಅವನು ನಿನಗೆ ಜೀವಕರವಾದ ನೀರನ್ನು ಕೊಡುವನು." ಯೋಹಾ.4:10
6. "ನನ್ನ ವಾಕ್ಯವನ್ನು ಕೇಳಿ ನನ್ನನ್ನು ಕಳುಹಿಸಿದಾತನನ್ನು ನಂಬುವವನು ನಿತ್ಯಜೀವವನ್ನು ಹೊಂದಿದ್ದಾನೆ. ಅವನು ತೀರ್ಪಿಗೆ ಗುರಿಯಾಗುವದಿಲ್ಲ." ಯೋಹಾ.5:24
7. "ನಿಮಗೆ ಸತ್ಯವಾಗಿ ಹೇಳುತ್ತೇನೆ,ಹೊಸ ಸೃಷ್ಟಿಯಲ್ಲಿ ಮನುಷ್ಯ ಕುಮಾರನು ತನ್ನ ಮಹಿಮೆಯ ಸಿಂಹಾಸನದ ಮೇಲೆ ಕೂತುಕೊಳ್ಳುವಾಗ ನನ್ನನ್ನು ಹಿಂಬಾಲಿಸಿರುವ ನೀವೂ ಸಹ ಇಸ್ರಾಯೇಲಿನ ಹನ್ನೆರಡು ಕುಲಗಳಿಗೆ ನ್ಯಾಯ ತೀರಿಸುವಿರಿ." ಮತ್ತಾ.19:28

8. ‘‘ನಾನೇ ಪುನರುತ್ಥಾನವೂ ಜೀವವೂ ಆಗಿದ್ದೇನೆ. ನನ್ನನ್ನು ನಂಬುವವನು ಸತ್ತರು ಬದುಕುವನು.’’ ಯೋಹಾ.11:25

9. ‘‘ನೀವು ನನ್ನಲ್ಲಿ ನೆಲೆಗೊಂಡಿರ್ರಿ. ನಾನೂ ನಿಮ್ಮಲ್ಲಿ ನೆಲೆಗೊಂಡಿರುವೆನು.’’ ಯೋಹ.15:4

10. ‘‘ನಾನು ದ್ರಾಕ್ಷೇಬಳ್ಳಿ, ನೀವು ಕೊಂಬೆಗಳು; ಒಬ್ಬನು ನನ್ನಲ್ಲಿಯೂ ನಾನು ಅವನಲ್ಲಿಯೂ ನೆಲೆಗೊಂಡಿದ್ದರೆ ಅವನೇ ಬಹಳ ಫಲಕೊಡುವನು.’’ ಯೊಹಾ.15:5

11. ‘‘ಯಾವನು ನನ್ನಲ್ಲಿ ನೆಲೆಗೊಂಡಿರುವದಿಲ್ಲವೋ ಅವನು ಆ ಕೊಂಬೆಯಂತೆ ಹೊರಕ್ಕೆ ಬಿಸಾಡಲ್ಪಟ್ಟು, ಒಣಗಿ ಹೋಗುವನು.’’ ಯೋಹಾ.15:6

12. ‘‘ನೀವು ನನ್ನಲ್ಲಿಯೂ ನನ್ನ ವಾಕ್ಯಗಳು ನಿಮ್ಮಲ್ಲಿಯೂ ನೆಲೆಗೊಂಡಿದ್ದರೆ ಏನು ಬೇಕಾದರೂ ಬೇಡಿಕೊಳ್ಳಿರಿ, ಅದು ನಿಮಗೆ ದೊರೆಯುವದು.’’ ಯೋಹಾ:15:7

13. ‘‘ನಾನು ನನ್ನ ತಂದೆಯ ಆಜ್ಞೆಗಳನ್ನು ಕೈಕೊಂಡು ನಡೆದು ಆತನ ಪ್ರೀತಿಯಲ್ಲಿ ನೆಲೆಗೊಂಡಿರುವ ಮೇರೆಗೆ ನೀವು ನನ್ನ ಆಜ್ಞೆಗಳನ್ನು ಕೈಕೊಂಡು ನಡೆದರೆ ನನ್ನ ಪ್ರೀತಿಯಲ್ಲಿ ನೆಲೆಗೊಂಡಿರುವಿರಿ.’’ ಯೋಹಾ.15:10

14. ‘‘ನೀವು ನನ್ನ ವಾಕ್ಯದಲ್ಲಿ ನೆಲೆಗೊಂಡವರಾದರೆ ನಿಜವಾಗಿಯೂ ನನ್ನ ಶಿಷ್ಯರಾಗಿದ್ದು ಸತ್ಯವನ್ನು ತಿಳುಕೊಳ್ಳುವಿರಿ.’’ ಯೋಹಾ.8:31

15. ‘‘ನೀನು ನನ್ನಲ್ಲಿಯೂ ನಾನು ನಿನ್ನಲ್ಲಿಯೂ ಇರುವ ಪ್ರಕಾರ

ಅವರು ನಮ್ಮಲ್ಲಿ ಇರಬೇಕೆಂತಲೂ ಕೇಳಿಕೊಳ್ಳುತ್ತೇನೆ.''
ಯೋಹಾ.17:21

16. ''ನೀನು ನನ್ನ ಮೇಲೆ ಇಟ್ಟಂಥ ಪ್ರೀತಿಯು ಅವರಲ್ಲಿ ಇರಬೇಕೆಂದೂ ನಾನೂ ಅವರಲ್ಲಿ ಇರಬೇಕೆಂದೂ ಪ್ರಾರ್ಥಿಸುತ್ತೇನೆ.'' ಯೋಹಾ.17:26

17. ''ಯಾರೂ ಹೊಸ ಬಟ್ಟೆಯ ತುಂಡನ್ನು ಹಳೆಯ ವಸ್ತ್ರಕ್ಕೆ ತ್ಯಾಪೆ ಹಚ್ಚುವದಿಲ್ಲ; ಹಚ್ಚಿದರೆ ಆ ಹೊಸ ತ್ಯಾಪೆಯು ಹಳೆಯ ವಸ್ತ್ರವನ್ನು ಹಿಂಜುವದರಿಂದ ಹರಕು ಹೆಚ್ಚಾಗುವದು.'' ಮಾರ್ಕ 2:21

18. ''ಹಳೆಯ ಬುದ್ದಲಿಗಳಲ್ಲಿ ಹೊಸ ದ್ರಾಕ್ಷಾರಸವನ್ನು ಯಾರೂ ಹಾಕಿಡುವದಿಲ್ಲ.'' ಮಾರ್ಕ 2:22

19. ''ನನ್ನ ಮಾಂಸವನ್ನು ತಿಂದು, ನನ್ನ ರಕ್ತವನ್ನು ಕುಡಿಯುವವನು ನನ್ನಲ್ಲಿ ಇರುತ್ತಾನೆ. ನಾನು ಅವನಲ್ಲಿ ಇರುತ್ತೇನೆ.'' ಯೋಹಾ.6:56

20. ''ಜೀವಸ್ವರೂಪನಾದ ತಂದೆಯು ನನ್ನನ್ನು ಕಳುಹಿಸಿಕೊಟ್ಟರಲಾಗಿ, ನಾನು ತಂದೆಯಿಂದ ಜೀವಿಸುತ್ತೇನೆ; ಅದರಂತೆ ನನ್ನನ್ನು ತಿನ್ನುವವನೇ ನನ್ನಿಂದ ಜೀವಿಸುವನು.'' ಯೋಹಾ.6:57

## 28. ದೇವರ ಕರೆ

''ನಾನೇ ಲೋಕಕ್ಕೆ ಬೆಳಕು; ನನ್ನನ್ನು ಅನುಸರಿಸುವವನು ಕತ್ತಲೆಯಲ್ಲಿ ನಡೆಯದೆ ಜೀವಕೊಡುವ ಬೆಳಕನ್ನು

ಹೊಂದಿದವನಾಗಿರುವನು.'' ಯೋಹಾ.8:12

2. ''ನನ್ನ ಕುರಿಗಳು ನನ್ನ ಸ್ವರಕ್ಕೆ ಕಿವಿಗೊಡುತ್ತವೆ; ನಾನು ಅವುಗಳನ್ನು ಬಲ್ಲೆನು; ಅವು ನನ್ನ ಹಿಂದೆ ಬರುತ್ತವೆ.'' ಯೋಹಾ.10:27

3. ''ಯಾವನಾದರೂ ನನ್ನ ಸೇವೆಯನ್ನು ಮಾಡುವವನಾದರೆ ನನ್ನ ಹಿಂದೆ ಬರಲಿ.'' ಯೋಹಾ.12:26

4. ''ಯಾವನಿಗಾದರೂ ನನ್ನ ಹಿಂದೆ ಬರುವದಕ್ಕೆ ಮನಸ್ಸಿದ್ದರೆ ಅವನು ತನ್ನನ್ನು ನಿರಾಕರಿಸಿ ತನ್ನ ಶಿಲುಬೆಯನ್ನು ಹೊತ್ತುಕೊಂಡು ನನ್ನ ಹಿಂದೆ ಬರಲಿ.'' ಮತ್ತಾ.16:24

5. ''ನನ್ನ ಹಿಂದೆ ಬನ್ನಿರಿ; ಮನುಷ್ಯರನ್ನು ಹಿಡಿಯುವ ಬೆಸ್ತರನ್ನಾಗಿ ನಿಮ್ಮನ್ನು ಮಾಡುವೆನು.'' ಮತ್ತಾ.4:19

6. ''ಎಲ್ಲೈ ಕಷ್ಟಪಡುವವರೇ, ಹೊರೆಹೊತ್ತವರೇ ನೀವೆಲ್ಲರೂ ನನ್ನ ಬಳಿಗೆ ಬನ್ನಿರಿ; ನಾನು ನಿಮಗೆ ವಿಶ್ರಾಂತಿ ಕೊಡುವೆನು.'' ಮತ್ತಾಯ 11:18.

7. ''ಯಾವನಾದರು ನೇಗಿಲಿನ ಮೇಲೆ ತನ್ನ ಕೈಯನ್ನು ಹಾಕಿ ಹಿಂದಕ್ಕೆ ನೋಡಿದರೆ ಅವನು ದೇವರ ರಾಜ್ಯಕ್ಕೆ ತಕ್ಕವನಲ್ಲ.'' ಲೂಕ 9:62

8. ''ನೋಡಿರಿ, ಲೋಕವೆಲ್ಲಾ ಅತನ ಹಿಂದೆ ಹೋಯಿತಲ್ಲಾ.'' ಯೋಹಾ.12:19

9. ''ಆತನು ಹನ್ನೆರಡು ಮಂದಿಯನ್ನು ಆರಿಸಿ ಅವರು ತನ್ನ ಸಂಗಡ ಇರಬೇಕೆಂತಲೂ ದೆವ್ವಗಳನ್ನು ಬಿಡಿಸುವ

ಅಧಿಕಾರವುಳ್ಳವರಾಗಿ ಸುವಾರ್ತೆಯನ್ನು ಸಾರುವದಕ್ಕೆ - ತಾನು ಅವರನ್ನು ಕಳುಹಿಸಿದನು." ಮಾರ್ಕ 3:14

10. "ನೀವು ನನ್ನ ವಾಕ್ಯದಲ್ಲಿ ನೆಲೆಗೊಂಡವರಾದರೆ ನಿಜವಾಗಿ ನನ್ನ ಶಿಷ್ಯರಾಗಿದ್ದು ಸತ್ಯವನ್ನು ತಿಳುಕೊಳ್ಳುವಿರಿ." ಯೋಹಾ.8:31

11. "ಯಾವನಾದರೂ ತನ್ನ ಶಿಲುಬೆಯನ್ನು ತೆಗೆದುಕೊಂಡು ನನ್ನ ಹಿಂದೆ ಬರದ ಹೊರತು ನನಗೆ ಯೋಗ್ಯನಲ್ಲ." ಮತ್ತಾ.10:38

12. "ನಿನಗೆ ಒಂದು ಕಡಿಮೆಯಾಗಿದೆ; ಹೋಗು ನಿನ್ನ ಬದುಕನ್ನೆಲ್ಲಾ ಮಾರಿ ಬಡವರಿಗೆ ಕೊಡು ಪರಲೋಕದಲ್ಲಿ ನಿನಗೆ ಸಂಪತ್ತಿರುವದು." ಮಾರ್ಕ 10:21

13. "ಅವನು ಬಹಳ ಆಸ್ತಿಯುಳ್ಳವನಾಗಿದ್ದರಿಂದ ಈ ಮಾತಿಗೆ ಮೋರೆ ಬಾಡಿದವನಾಗಿ ದುಃಖದಿಂದ ಹೊರಟು ಹೋದನು." ಮಾರ್ಕ 10:22

14. "ವಾಕ್ಯವನ್ನು ಕೇಳಿದ ಕೂಡಲೇ ಅದನ್ನು ಸ್ವೀಕರಿಸುತ್ತಾನೆ; ತನಗೆ ಬೇರಿಲ್ಲದ ಕಾರಣ ಇವನು ಸ್ವಲ್ಪ ಕಾಲ ಮಾತ್ರವೇ ಇದ್ದು ಆ ವಾಕ್ಯದ ನಿಮಿತ್ತವಾಗಿ ಸಂಕಟವಾಗಲಿ ಹಿಂಸೆ ಯಾಗಲಿ ಬಂದರೆ ಬೇಗ ಎಡವಿ ಬೀಳುತ್ತಾನೆ." ಮತ್ತಾ.13:20

15. "ಹಾಗೆಯೇ ನಿಮ್ಮಲ್ಲಿ ಯಾವನೇ ಆಗಲಿ ತನಗಿರುವದನ್ನೆಲ್ಲ ಬಿಟ್ಟು ಬಿಡದೆ ಹೋದರೆ ಅವನು ನನ್ನ ಶಿಷ್ಯನಾಗಿರಲಾರನು." ಲೂಕ 14:33

16. "ದೆವ್ವವು ಮನುಷ್ಯನನ್ನು ಬಿಟ್ಟು, ಹೋದ ಮೇಲೆ ವಿಶ್ರಾಂತಿ ಯನ್ನು ಹುಡುಕುತ್ತ ನೀರಿಲ್ಲದ ಸ್ಥಳಗಳಲ್ಲಿ ತಿರುಗಾಡುತ್ತದೆ. ವಿಶ್ರಾಂತಿ ಸಿಕ್ಕದ ಕಾರಣ ಅದು - ನಾನು ಬಿಟ್ಟು ಬಂದ ನನ್ನ ಮನೆಗೆ ತಿರಿಗಿ ಹೋಗುತ್ತೇನೆ ಅಂದುಕೊಂಡು ಬಂದು ಆ ಮನೆ ಒಕ್ಕಲಿಲ್ಲದ್ದೂ ಗುಡಿಸಿ ಅಲಂಕರಿಸಿದ್ದೂ ಕಂಡು..." ಮತ್ತಾ.12:43,44

17. "ಹೊರಟು ಹೋಗಿ ತನಗಿಂತ ಕೆಟ್ಟವುಗಳಾದ ಬೇರೆ ಏಳು ದೆವ್ವಗಳನ್ನು ತನ್ನೊಂದಿಗೆ ಕರಕೊಂಡು ಬರುವದು; ಅವು ಒಳಹೊಕ್ಕು ಅಲ್ಲಿ ವಾಸಮಾಡುವವು."ಮತ್ತಾ.12:45

18. "ಆಗ ಆ ಮನುಷ್ಯನ ಅಂತ್ಯಸ್ಥಿತಿಯು ಮೊದಲಿಗಿಂತ ಕೆಟ್ಟದ್ದಾಗುವದು." ಮತ್ತಾ.12:45

19. "ಅಧರ್ಮವು ಹೆಚ್ಚಾಗುವದರಿಂದ ಬಹು ಜನರ ಪ್ರೀತಿ ತಣ್ಣಗಾಗುವದು." ಮತ್ತಾ.24:12

20. "ಸುಳ್ಳು ಕ್ರಿಸ್ತನೂ ಸುಳ್ಳು ಪ್ರವಾದಿಗಳೂ ಎದ್ದು ಸಾಧ್ಯವಾದರೆ ದೇವರಾದುಕೊಂಡವರನ್ನು ಸಹ ಮೋಸಗೊಳಿಸುವದಕ್ಕೋಸ್ಕರ ದೊಡ್ಡದೊಡ್ಡ ಸೂಚಕಕಾರ್ಯಗಳನ್ನು ಅದ್ಭುತಕಾರ್ಯಗಳನ್ನು ಮಾಡಿ ತೋರಿಸುವರು." ಮತ್ತಾ.24:24

## 29. ಕೇಳಿಕೊಳ್ಳುವದೂ ಮತ್ತು ಕೊಡುವದೂ

1. "ಒಂದು ಊರಿನಲ್ಲಿ ಒಬ್ಬ ನ್ಯಾಯಾಧಿಪತಿ ಇದ್ದನು; ಅವನು ದೇವರಿಗೆ ಹೆದರದವನು ಮನುಷ್ಯರನ್ನು ಲಕ್ಷ್ಯ ಮಾಡದವನು." ಲೂಕ 18:2

2. ‘‘ಅದೇ ಊರಿನಲ್ಲಿ ಒಬ್ಬ ಬಡ ವಿಧವೆ ಇದ್ದಳು. ಆಕೆಯು ಅವನ ಬಳಿಗೆ ಬಂದು - ನ್ಯಾಯ ವಿಚಾರಣೆ ಮಾಡಿ ನನ್ನ ವಿರೋಧಿಯಿಂದ ನನ್ನನ್ನು ಬಿಡಿಸು ಎಂದು ಹೇಳಿಕೊಳ್ಳುತ್ತಿದ್ದಳು.’’ ಲೂಕ 18:3

3. ‘‘ಸ್ವಲ್ಪ ಕಾಲ ಅವನು ಮನಸ್ಸು ಕೊಡಲಿಲ್ಲ; ಆಮೇಲೆ ಅವನು - ನಾನು ದೇವರಿಗೆ ಹೆದರುವವನಲ್ಲ; ಮನುಷ್ಯರನ್ನು ಲಕ್ಷ್ಯ ಮಾಡುವವನಲ್ಲ.’’ ಲೂಕ 18:4

4. ‘‘ಈ ವಿಧವೆ ನನ್ನನ್ನು ಕಾಡುತ್ತಾ ಬರುವದರಿಂದ ಈಕೆಯ ನ್ಯಾಯವನ್ನು ವಿಚಾರಿಸಿ ತೀರ್ಪು ಮಾಡುವೆನು ಇಲ್ಲವಾದರೆ ಈಕೆಯು ಬಂದುಬಂದು ಕಡೆಗೆ ನನ್ನನ್ನು ದಣಿಸಾಳು ಎಂದು ತನ್ನೊಳಗೆ ಅಂದುಕೊಂಡನು.’’ ಲೂಕ 18:5

5. ‘‘ಅನ್ಯಾಯಗಾರನಾದ ಈ ನ್ಯಾಯಾಧಿಪತಿ ಅಂದುಕೊಂಡದ್ದನ್ನು ಆಲೋಚಿಸಿಕೊಳ್ಳಿರಿ.’’ ಲೂಕ18:6

6. ‘‘ದೇವರಾದುಕೊಂಡವರು ಆತನಿಗೆ ಹಗಲು ರಾತ್ರಿ ಮೊರೆಯಿಡುವಲ್ಲಿ ಆತನು ಅವರ ವಿಷಯದಲ್ಲಿ ತಡ ಮಾಡಿದರೂ ಅವರ ನ್ಯಾಯವನ್ನುತೀರಿಸದೆ ಇರುವನೇ?’’ಲೂಕ 18:7

7. ‘‘ಅವರಿಗೆ ಬೇಗ ನ್ಯಾಯ ತೀರಿಸುವನೆಂದು ನಿಮಗೆ ಹೇಳುತ್ತೇನೆ.’’ ಲೂಕ 18:7

8. ‘‘ನಿಮ್ಮಲ್ಲಿ ಒಬ್ಬನಿಗ ಸ್ನೇಹಿತನಿದ್ದಾನೆ ಎಂದು ಹೇಳೋಣ. ಅವನು ಸರು ಹೊತ್ತಿನಲ್ಲಿ ಆ ಸ್ನೇಹಿತನ ಬಳಿಗೆ ಹೋಗಿ...’’ ಲೂಕ 11:5

9. "ಸ್ನೇಹಿತನೇ, ನನಗೆ ಮೂರು ರೊಟ್ಟಿಗಳನ್ನು ಕಡವಾಗಿ ಕೊಡು; ನನ್ನ ಸ್ನೇಹಿತರಲ್ಲಿ ಒಬ್ಬನು ಎಲ್ಲಿಗೋ ಪ್ರಯಾಣವಾಗಿ ನನ್ನ ಬಳಿಗೆ ಬಂದಿದ್ದಾನೆ; ಅವನಿಗೆ ಊಟ ಮಾಡಿಸುವದಕ್ಕೆ ನನ್ನಲ್ಲಿ ಏನೂ ಇಲ್ಲ." ಲೂಕ 11:6,7

10. "ಆ ಸ್ನೇಹಿತನು - ನನಗೆ ತೊಂದರೆ ಕೊಡಬೇಡ, ಈಗ ಕದಾ ಹಾಕಿದೆ, ನನ್ನ ಚಿಕ್ಕ ಮಕ್ಕಳು ನನ್ನ ಕೂಡ ಮಲಗಿದ್ದಾರೆ, ನಾನು ಎದ್ದು ನಿನಗೆ ಕೊಡುವದಕ್ಕಾಗುವದಿಲ್ಲ ಎಂದು ಒಳಗಿನಿಂದ ಉತ್ತರ ಕೊಟ್ಟರೂ ಕೊಡಬಹುದು." ಲೂಕ 11:7

11. "ಆದರೆ ಸ್ನೇಹದ ನಿಮಿತ್ತವಾಗಿ ಎದ್ದು ಕೊಡದೆ ಇದ್ದರೂ ಅವನ ಕಾಟದ ದೆಸೆಯಿಂದ ಎದ್ದು ಬಂದು ಕೇಳಿದಷ್ಟು ಅವನಿಗೆ ಕೊಡುವನು." ಲೂಕ 11:8

12. "ನಾನು ನಿಮಗೆ ಹೇಳುವದೇನಂದರೆ - ಬೇಡಿಕೊಳ್ಳಿರಿ ನಿಮಗೆ ದೊರೆಯುವದು; ಹುಡುಕಿರಿ ನಿಮಗೆ ಸಿಕ್ಕುವದು; ತಟ್ಟಿರಿ ನಿಮಗೆ ತೆರೆಯುವದು." ಲೂಕ 11:9

13. "ಯಾಕೆಂದರೆ ಬೇಡಿಕೊಳ್ಳುವ ಪ್ರತಿಯೊಬ್ಬನೂ ಹೊಂದುವನು. ಹುಡುಕುವವನಿಗೆ ಸಿಕ್ಕುವದು. ತಟ್ಟುವವನಿಗೆ ತೆರೆಯುವದು." ಲೂಕ 11:10

14. "ನಿಮ್ಮಲ್ಲಿ ತಂದೆಯಾದವನು ಮೀನನ್ನು ಕೇಳುವ ಮಗನಿಗೆ ಮೀನು ಕೊಡದೆ ಹಾವನ್ನು ಕೊಡುವನೇ?" ಲೂಕ 11:11

15. "ಕೆಟ್ಟವರಾದ ನೀವು ನಿಮ್ಮ ಮಕ್ಕಳಿಗೆ ಒಳ್ಳೇ ಪದಾರ್ಥಗಳನ್ನು ಕೊಡಬಲ್ಲವರಾದರೆ ಪರಲೋಕದಲ್ಲಿರುವ

ನಿಮ್ಮ ತಂದೆಯು ತನ್ನನ್ನು ಬೇಡಿಕೊಳ್ಳುವವರಿಗೆ ಎಷ್ಟೋ ಹೆಚ್ಚಾಗಿ ಪವಿತ್ರಾತ್ಮನನ್ನು ಕೊಡುವನಲ್ಲವೇ.'' ಲೂಕ 11:13

16. ''ನಿನ್ನನ್ನು ಬೇಡಿಕೊಳ್ಳುವವರಿಗೆ ಕೊಡು, ನಿನ್ನ ಸೊತ್ತು ಕಸುಕೊಳ್ಳುವವನನ್ನು ಹಿಂದಕ್ಕೆ ಕೊಡೆಂದು ಕೇಳಬೇಡ.'' ಲೂಕ 6:30

17. ''ಕೊಡಿರಿ ಆಗ ನಿಮಗೂ ಕೊಡುವರು; ಜಡಿದು ಅಲ್ಲಾಡಿಸಿ ಹೊರ ಚೆಲ್ಲುವ ಹಾಗೆ ತುಂಬಾ ಅಳತೆಯನ್ನು ಅಳೆದು ನಿಮ್ಮ ಸೆರಗಿಗೆ ಹಾಕುವರು.'' ಲೂಕ 6:38

18. ''ಜನರು ನಿಮಗೆ ಏನೇನು ಮಾಡಬೇಕೆಂದು ಅಪೇಕ್ಷಿಸುತ್ತಿರೋ ಅಂಥದನ್ನೇ ಅವರಿಗೆ ಮಾಡಿರಿ.''ಲೂಕ 6:31

19. ''ನೀವಾದರೋ ನಿಮ್ಮ ವೈರಿಗಳನ್ನು ಪ್ರೀತಿಸಿ. ಅವರಿಗೆ ಉಪಕಾರ ಮಾಡಿರಿ. ಹೀಗೆ ಮಾಡಿದರೆ ನಿಮಗೆ ಬಹಳ ಫಲ ಸಿಕ್ಕುವದು.'' ಲೂಕ 6:35

20. ''ಯಾಕೆಂದರೆ ಇದ್ದವನಿಗೆ ಕೊಡಲ್ಪಡುವದು; ಅವನಿಗೆ ಮತ್ತೂ ಹೆಚ್ಚಾಗುವದು; ಇಲ್ಲದವನ ಕಡೆಯಿಂದ ಇದ್ದದ್ದೂ ತೆಗೆಯಲ್ಪಡುವದು.'' ಮತ್ತಾ.13:12

## 30. ನಂಬಿಕೆ

1. ''ಯೇಸು ಇದನ್ನು ಕೇಳಿ ಆಶ್ಚರ್ಯಪಟ್ಟು ತನ್ನ ಹಿಂದೆ ಬರುತ್ತಿರುವವರಿಗೆ - ನಾನು ಇಂಥ ದೊಡ್ಡ ನಂಬಿಕೆಯನ್ನು ಇಸ್ರಾಯೇಲ್ ಜನರಲ್ಲಿಯೂ ಕಾಣಲಿಲ್ಲ ಅಂದನು.''

ಮತ್ತಾ.8:10

2. "ನೀನು ನಂಬಿದಂತೆ ನಿನಗಾಗಲಿ, ಹೋಗು ಎಂದು ಹೇಳಿದನು." ಮತ್ತಾಯ 8:13.

3. "ಯೇಸು ಅವರ ನಂಬಿಕೆಯನ್ನು ನೋಡಿ ಆ ಪಾರ್ಶ್ವವಾಯು ರೋಗಿಗೆ - ಮಗನೇ, ನಿನ್ನ ಪಾಪಗಳು ಕ್ಷಮಿಸಲ್ಪಟ್ಟಿವೆ ಎಂದು ಹೇಳಿದನು" ಮಾರ್ಕ 2:5.

4. "ಯೇಸು ಹಿಂತಿರುಗಿ ಆಕೆಯನ್ನು ನೋಡಿ- ಮಗಳೇ, ಧೈರ್ಯವಾಗಿರು; ನಿನ್ನ ನಂಬಿಕೆಯೇ ನಿನ್ನನ್ನು ಸ್ವಸ್ಥಮಾಡಿತು ಅಂದನು" ಮತ್ತಾ 9:22.

5. "ಯೇಸು ಅವರನ್ನು - ನಾನು ಇದನ್ನು ಮಾಡಬಲ್ಲೆನೆಂಬದನ್ನು ನಂಬುತ್ತೀರೋ ಎಂದು ಕೇಳಿದ್ದಕ್ಕೆ ಅವರು - ಹೌದು ಸ್ವಾಮಿ ನಂಬುತ್ತೇವೆ ಅಂದರು. ಆಗ ಆತನು ಅವರ ಕಣ್ಣುಗಳನ್ನು ಮುಟ್ಟಿ-ನೀವು ನಂಬಿದಂತೆ ನಿಮಗೆ ಆಗಲಿ ಅಂದನು" ಮತ್ತಾ 9:29

6. "ಯೇಸು ಆಕೆಗೆ- ಆಮ್ಮಾ, ನಿನ್ನ ನಂಬಿಕೆ ಬಹಳ ನಿನ್ನ ಮನಸ್ಸಿನಂತೆ ಆಗಲಿ ಎಂದು ಉತ್ತರ ಕೊಟ್ಟನು; ಅದೇ ಗಳಿಗೆಯಲ್ಲಿ ಆಕೆಯ ಮಗಳು ಸ್ವಸ್ಥಳಾದಳು." ಮತ್ತಾಯ 15:28.

7. "ನನ್ನಲ್ಲಿ ನಂಬಿಕೆಯಿಂದಿರುವ ಈ ಚಿಕ್ಕವರಲ್ಲಿ ಒಬ್ಬನಿಗೆ ಯಾವನಾದರು ಅಡ್ಡಿಯಾದರೆ ಅಂಥವನ ಕೊರಳಿಗೆ ಬೀಸುವ ಕಲ್ಲು ಕಟ್ಟಿ ಅವನನ್ನು ಆಳವಾದ ಸಮುದ್ರದಲ್ಲಿ ಹಾಕಬೇಕು" ಮತ್ತಾ 18:6.

8. “ಯೇಸು-ನಿಮಗೆ ಸತ್ಯವಾಗಿ ಹೇಳುತ್ತೇನೆ ನೀವು ಸಂಶಯ ಪಡದೆ ನಂಬಿದರೆ ನಾನು ಅಂಜೂರದ ಮರಕ್ಕೆ ಮಾಡಿದಂಥದ್ದನ್ನು ನೀವು ಮಾಡುವಿರಿ” ಮತ್ತಾ 21:21.

9. “ನೀವು ನಂಬಿ ಕೊಂಡು ಪ್ರಾರ್ಥನೆಯಲ್ಲಿ ಏನೇನು ಬೇಡಿಕೊಳ್ಳುವಿರೋ ಅದನ್ನೆಲ್ಲಾ ಹೊಂದುವಿರಿ ಅಂದನು” ಮತ್ತಾ 21:22

10. “ಕಾಲ ಪರಿಪೂರ್ಣವಾಯಿತು, ದೇವರ ರಾಜ್ಯವು ಸಮೀಪಿಸಿತು. ದೇವರ ಕಡೆಗೆ ತಿರುಗಿಕೊಂಡು ಸುವಾರ್ತೆಯನ್ನು ನಂಬಿರಿ” ಮಾರ್ಕ 1:15.

11. “ಯೇಸು ಲಕ್ಷ್ಯಮಾಡದೆ ಸಭಾ ಮಂದಿರದ ಅಧಿಕಾರಿಗೆ-ಅಂಜಬೇಡ, ನಂಬಿಕೆ ಮಾತ್ರ ಇರಲಿ ಎಂದು ಹೇಳಿದನು” ಮಾರ್ಕ 5:36.

12. “ಯೇಸು ಅವನಿಗೆ - ನಿನಗೆ ಕಣ್ಣುಬರಲಿ; ನಿನ್ನ ನಂಬಿಕೆಯೇ ನಿನ್ನನ್ನು ಸ್ವಸ್ಥಮಾಡಿ ಅದೆ ಎಂದು ಹೇಳಿದನು.” ಲೂಕ 18:42.

13. “ಆದಕಾರಣ ನೀವು ಪ್ರಾರ್ಥನೆ ಮಾಡಿ ಏನೇನು ಬೇಡಿಕೊಳ್ಳುತ್ತೀರೋ ಅದನ್ನೇಲ್ಲಾ ಹೊಂದಿದ್ದೇವೆಂದು ನಂಬಿರಿ; ಅದು ನಿಮಗೆ ಸಿಕ್ಕುವದು” ಮಾರ್ಕ 11:24.

14. “ನಂಬಿ ದೀಕ್ಷಾಸ್ನಾನ ಮಾಡಿಸಿಕೊಳ್ಳುವವನು ರಕ್ಷಣೆ ಹೊಂದುವನು. ನಂಬದೆ ಹೋಗುವವನು ದಂಡನೆಗೆ ಗುರಿಯಾಗುವನು” ಮಾರ್ಕ 16:16

15. ''ನಿನ್ನ ನಂಬಿಕೆಯೇ, ನಿನ್ನನ್ನು ರಕ್ಷಿಸಿ ಅದೆ ಸಮಾಧಾನದಿಂದ ಹೋಗು ಎಂದು ಹೇಳಿದನು'' ಲೂಕ 7:50

16. ''ನಮ್ಮ ನಂಬಿಕೆಯನ್ನು ಹೆಚ್ಚಿಸು ಎಂದು ಹೇಳಲು ಸ್ವಾಮಿಯು ಸಾಸಿವೆ ಕಾಳಷ್ಟು ನಂಬಿಕೆ ನಿಮಗಿದ್ದರೆ ನೀವು ಈ ಅತ್ತಿ ಮರಕ್ಕೆ ನೀನು ಬೇರು ಸಹಿತ ಕಿತ್ತು ಕೊಂಡು ಹೋಗಿ ಸಮುದ್ರದಲ್ಲಿ ನಾಟಿಕೋ ಎಂದು ಹೇಳಿದರೂ ಅದು ನಿಮ್ಮ ಮಾತನು ಕೇಳುವದು'' ಲೂಕ 17:5.

17. ''ನೀವು ಸೂಚಕಕಾರ್ಯಗಳನ್ನೂ ಅದ್ಭುತ ಕಾರ್ಯಗಳನ್ನೂ ನೋಡದಿದ್ದರೆ ನಂಬುವದೇ ಇಲ್ಲ'' ಯೋಹಾ.4:48.

18. ''ನನ್ನನ್ನು ನಂಬುವವನು ಸತ್ತರು ಬದುಕುವನು; ಬದುಕುತ್ತಾ ನನ್ನನ್ನು ನಂಬುವನು ಸತ್ತರೂ ಬದುಕುವನು'' ಯೋಹಾ 11:26

19. ''ಆದರೆ ಯೇಸು ದೇವಕುಮಾರನಾದ ಕ್ರಿಸ್ತನೆಂದು ನೀವು ನಂಬುವಂತೆಯೂ, ನಂಬಿ ಆತನ ಹೆಸರಿನ  ಮೂಲಕವಾಗಿ ಜೀವವನ್ನು ಪಡೆದುಕೊಳ್ಳುವಂತೆಯೂ ಇಷ್ಟೆಲ್ಲಾ ಬರೆದಿದೆ'' ಯೋಹಾ 20:30.

20. ''ದೇವರು ಮೆಚ್ಚುವ  ಕೆಲಸ ಯಾವದಂದರೆ ಆತನು ಕಳುಹಿಸಿಕೊಟ್ಟವನನ್ನು ನಂಬುವದೇ.'' ಯೋಹಾ.6:29.

## 31. ವಿಧೇಯತೆಯೂ ಕರ್ತನ ಚಿತ್ತವೂ

1. ''ಒಬ್ಬ ಮನುಷ್ಯನಿಗೆ ಇಬ್ಬರು ಮಕ್ಕಳಿದ್ದರು. ಅವನು ಮೊದಲನೆಯವನ ಬಳಿಗೆ ಬಂದು - ಮಗನೇ, ಹೋಗಿ ಈ

ಹೊತ್ತು ದ್ರಾಕ್ಷೇತೋಟದಲ್ಲಿ ಕೆಲಸಮಾಡು ಅಂದನು."
ಮತ್ತಾ 21:28.

2. "ಅವನು ನಾನು ಹೋಗುವದಿಲ್ಲವೆಂದು ಹೇಳಿದಾಗ್ಯೂ ತರುವಾಯ ಪಶ್ಚಾತ್ತಾಪಪಟ್ಟು ತೋಟಕ್ಕೆ ಹೋದನು" ಮತ್ತಾ 21:29.

3. "ಆ ಮೇಲೆ ಎರಡನೆಯವನು ಬಳಿಗೆ ಬಂದು ಅದೇ ಮಾತನ್ನು ಹೇಳಿದಾಗ ಅವನು -ಹೋಗುತ್ತೇನಪ್ಪಾ ಅಂದಾಗ್ಯೂ ಹೋಗಲೇಇಲ್ಲ" ಮತ್ತಾ 21:30.

4. "ಅವರಿಬ್ಬರಲ್ಲಿ ತಂದೆಯ ಚಿತ್ತದಂತೆ ನಡೆದವನು ಯಾರು ಎಂದು ಕೇಳಿದ್ದಕ್ಕೆ ಅವರು ಮೊದಲನೆಯವನೇ ಅಂದರು. ಯೇಸು ಅವರಿಗೆ ಭ್ರಷ್ಟರೂ ಸೂಳೆಯರೂ ನಿಮಗಿಂತ ಮೊದಲು ದೇವರ ರಾಜ್ಯವನ್ನು ಸೇರುವವರೆಂದು ಸತ್ಯವಾಗಿ ಹೇಳುತ್ತೇನೆ" ಮತ್ತಾ 21:31.

5. "ಭಕ್ತಿಹೀನರ ಪ್ರಾರ್ಥನೆಯನ್ನು ದೇವರು ಕೇಳುವದಿಲ್ಲ; ಯಾವನು ಭಕ್ತನಾಗಿದ್ದು ಆತನ ಚಿತ್ತದಂತೆ ನಡೆಯುತ್ತಾನೋ ಅವನ ಪ್ರಾರ್ಥನೆಯನ್ನು ಕೇಳುತ್ತಾನೆ. ಯೋಹಾ 9:31.

6. "ಯೇಸು ಅವರಿಗೆ - ನನ್ನನ್ನು ಕಳುಹಿಸಿದಾತನ ಚಿತ್ತದಂತೆ ಮಾಡಿ ಆತನ ಕೆಲಸವನ್ನು ಪೂರೈಸುವದೇ ನನ್ನ ಆಹಾರವು"ಯೋಹಾ 4:34.

7. "ನನ್ನ ಚಿತ್ತದಂತೆ ನಡೆಯುವದಕ್ಕಾಗಿ ನಾನು ಬಂದಿಲ್ಲ,

ನನ್ನನ್ನು ಕಳುಹಿಸಿದಾತನ ಚಿತ್ತವನ್ನೇ ನೆರವೇರಿಸುವದಕ್ಕೆ ಪರಲೋಕದಿಂದ ಬಂದೆನು'' ಯೋಹಾ 6:38.

8. ''ಮಗನನ್ನು ನೋಡಿ ಆತನನ್ನು ನಂಬುವ ಪ್ರತಿಯೊಬ್ಬನಿಗೆ ನಿತ್ಯ ಜೀವವು ಸಿಕ್ಕ ಬೇಕೆಂಬದೇ ನನ್ನ ತಂದೆಯ ಚಿತ್ತವಾಗಿದೆ'' ಯೋಹಾ 6:40.

9. ''ಸ್ವಂತ ಚಿತ್ತ ನೆರವೇರಬೇಕೆಂದು ಅಪೇಕ್ಷಿಸದೆ ನನ್ನನ್ನು ಕಳುಹಿಸಿದಾತನ ಚಿತ್ತನೆರವೇರಬೇಕೆಂದು ಅಪೇಕ್ಷಿಸುವದರಿಂದ ನಾನು ಮಾಡುವ ತೀರ್ಪು ನ್ಯಾಯವಾಗಿದೆ''ಯೋಹಾ 5:30.

10. ''ನನ್ನನು ಕಳುಹಿಸಿದಾತನ ಚಿತ್ತವು ಏನೆಂದರೆ ಆತನು ನನಗೆ ಕೊಟ್ಟವರಲ್ಲಿ ಒಬ್ಬನನ್ನು ನಾನು ಕೆಡಗೊಡಿಸದೆ ಅವನನ್ನು ಕಡೇ ದಿನದಲ್ಲಿ ಎಬ್ಬಿಸಬೇಕೆಂಬದೇ'' ಯೋಹಾ.6:39.

11. ''ದುಡ್ಡಿಗೆ ಎರಡು ಗುಬ್ಬಿಗಳನ್ನು ಮಾರುವದುಂಟಲ್ಲಾ; ಆದರೂ ನಿಮ್ಮ ತಂದೆಯ ಚಿತ್ತವಿಲ್ಲದೆ ಒಂದಾದರು ನೆಲಕ್ಕೆ ಬೀಳದು'' ಮತ್ತಾ 10:29.

12. ''ಪರಲೋಕದಲ್ಲಿರುವ ನನ್ನ ತಂದೆಯ ಚಿತ್ತದಂತೆ ನಡೆಯುವವನೇ ನನಗೆ ತಮ್ಮನೂ ತಂಗಿಯೂ ತಾಯಿಯೂ ಆಗಬೇಕು.'' ಮತ್ತಾ 12:50.

13. ''ಈ ಚಿಕ್ಕವರಲ್ಲಿ ಒಬ್ಬನಾದರೂ ಕೆಟ್ಟು ಹೋಗುವದು ಪರಲೋಕದಲ್ಲಿರುವ ನಿಮ್ಮ ತಂದೆಯ

ಚಿತ್ತವಲ್ಲ.''ಮತ್ತಾ.18:14

14. ''ತನ್ನ ಯಜಮಾನನ ಚಿತ್ತವನ್ನು ತಿಳಿದ ಆಳು ಸಿದ್ಧ ಮಾಡದೆ ಹೋದರೆ ಆತನ ಚಿತ್ತಕ್ಕನುಸಾರ ನಡೆಯದಿದ್ದರೆ ಅವನು ಬಹಳ ಪೆಟ್ಟು ತಿನ್ನುವನು'' ಲೂಕ 12:47.

15. ''ನಿಮಗೆ ಅಪ್ಪಣೆಯಾಗಿರುವದನ್ನೆಲ್ಲಾ ಮಾಡಿದ ಮೇಲೆ- ನಾವು ಆಳುಗಳು, ಪ್ರಯೋಜನವಿಲ್ಲದವರು, ಮಾಡಬೇಕಾದದ್ದನ್ನೇ ಮಾಡಿದ್ದೇವೆ ಅನ್ನಿರಿ.'' ಲೂಕ.17:20.

16. ''ನಿನ್ನ ಚಿತ್ತವು ಪರಲೋಕದಲ್ಲಿ ನೆರವೇರುವ ಪ್ರಕಾರ ಭೂಲೋಕದಲ್ಲಿಯೂ ನೆರವೇರಲಿ. ಮತ್ತಾ 6:10.

17. ''ಆತನ ಚಿತ್ತದಂತೆ ನಡೆಯುವದಕ್ಕೆ ಯಾರಿಗೆ ಮನಸ್ಸದೆಯೋ ಅವರಿಗೆ ಈ ಬೋಧನೆಯು ದೇವರಿಂದ ಬಂದದ್ದೋ ನಾನೇ ಕಲ್ಪಿಸಿ ಹೇಳಿದ್ದೋ ಗೊತ್ತಾಗುವದು.'' ಯೋಹಾನ 7:17.

18. ''ಆತನ ಚಿತ್ತದಂತೆ ನಡೆಯುವದಕ್ಕೆ ಯಾರಿಗೆ ಮನಸ್ಸಿದೆಯೋ ಅವರಿಗೆ ಈ ಬೋಧನೆಯು ದೇವರಿಂದ ಬಂದದ್ದೋ ನಾನೇ ಕಲ್ಪಿಸಿ ಹೇಳಿದ್ದೋ ಗೊತ್ತಾಗುವದು'' ಯೋಹಾನ 7:17.

19. ''ಪರಲೋಕದಲ್ಲಿರುವ ನನ್ನ ತಂದೆಯ ಚಿತ್ತದಂತೆ ನಡೆಯುವವನೇ ಪರಲೋಕ ರಾಜ್ಯಕ್ಕೆ ಸೇರುವನು.'' ಮತ್ತಾಯ 7:21.

20. "ನನ್ನ ತಂದೆಯೇ, ನಾನು ಕುಡಿದ ಹೊರತು ಈ ಪಾತ್ರೆ ಬಿಟ್ಟು ಹೋಗಕೂಡದಾಗಿದ್ದರೆ ನಿನ್ನ ಚಿತ್ತವೇ ಆಗಲಿ" ಮತ್ತಾ 26:42.

## 32. ಸಂತೋಷವೂ ಸಮಾಧಾನವೂ

1. "ದೇವರ ಕಡೆಗೆ ತಿರುಗಿಕೊಳ್ಳುವ ಒಬ್ಬ ಪಾಪಿಯ ವಿಷಯವಾಗಿ ಪರಲೋಕದಲ್ಲಿ ಸಂತೋಷವಾಗುವದೆಂದು ನಿಮಗೆ ಹೇಳುತ್ತೇನೆ" ಲೂಕ 15:7.
2. "ಭಲಾ, ನಂಬಿಗಸ್ತನಾದ, ಒಳ್ಳೇ ಆಳು ನೀನು; ಸ್ವಲ್ಪ ಕೆಲಸದಲ್ಲಿ ನಂಬಿಗಸ್ತನಾಗಿದ್ದೀ, ದೊಡ್ಡ ಕೆಲಸದಲ್ಲಿ ನಿನ್ನನ್ನು ಇಡುತ್ತೇನೆ" ಮತ್ತಾ 25:21.
3. "ದೆವ್ವಗಳು ಅಧೀನವಾಗಿವೆ ಎಂದು ಸಂತೋಷಪಡದೆ ನಮ್ಮ ಹೆಸರುಗಳು ಪರಲೋಕದಲ್ಲಿ ಬರೆದಿರುತ್ತವೆ ಎಂದು ಸಂತೋಷಪಡಿರಿ" ಲೂಕ 10:20.
4. "ನಾನು ಹೋಗಿ ತಿರುಗಿ ನಿಮ್ಮ ಬಳಿಗೆ ಬರುತ್ತೇನೆಂದು ನಿಮಗೆ ಹೇಳಿದ್ದನ್ನು ಕೇಳಿದಿರಿ. ನೀವು ನನ್ನನ್ನು ಪ್ರೀತಿಸುವವರಾಗಿದ್ದರೆ ನಾನು ತಂದೆಯ ಬಳಿಗೆ ಹೋಗುವ ವಿಷಯದಲ್ಲಿ ಸಂತೋಷಪಡುತ್ತಿದ್ದಿರಿ" ಯೋಹಾ.14:28.
5. "ನನ್ನ ಆನಂದವು ನಿಮ್ಮಲ್ಲಿಯೂ ಇರಬೇಕೆಂತಲೂ ನಿಮ್ಮ ಆನಂದವು ಪರಿಪೂರ್ಣವಾಗಬೇಕೆಂತಲೂ ಇದನ್ನೆಲ್ಲಾ ನಿಮಗೆ ಹೇಳಿದ್ದೇನೆ." ಯೋಹಾ.15:11.
6. "ಹಾಗೆಯೇ ನಿಮಗೂ ಈಗ ದುಃಖವಿದ್ದರೂ ನಾನು

ನಿಮ್ಮನ್ನು ತಿರಿಗಿ ನೋಡುವೆನು, ಆಗ ನಿಮ್ಮ ಹೃದಯಕ್ಕೆ ಆನಂದವಾಗುವದು'' ಯೋಹಾ.16:22.

7. ''ನನ್ನ ಹೆಸರಿನ ಮೇಲೆ ಯಾವದೊಂದನ್ನೂ ಬೇಡಿಕೊಂಡಿಲ್ಲ; ಬೇಡಿಕೊಳ್ಳಿರಿ ನಿಮಗೆ ಸಿಕ್ಕುವದು; ಆಗ ನಿಮ್ಮ ಆನಂದವು ಪರಿಪೂರ್ಣವಾಗುವದು'' ಯೋಹಾ.16:24.

8. ''ಕೊಯ್ಯುವವನಿಗೆ ಈಗಲೇ ಕೂಲಿ ದೊರೆಯುತ್ತದೆ. ಅವನು ನಿತ್ಯ ಜೀವಕ್ಕೆ ಫಲವನ್ನು ಕೂಡಿಸಿಡುತ್ತಾನೆ. ಹೀಗೆ ಬಿತ್ತುವವನಿಗೆ, ಕೊಯ್ಯುವವನಿಗೆ ಕೂಡ ಸಂತೋಷವಾಗುವದು.'' ಯೋಹಾ.4:36.

9. ''ಮಗಳೇ ನಿನ್ನ ನಂಬಿಕೆಯೇ ನಿನ್ನನ್ನು ಸ್ವಸ್ಥಮಾಡಿತು; ಸಮಾಧಾನದಿಂದ ಹೋಗು.'' ಮಾರ್ಕ 5:34.

10. ''ಉಪ್ಪು ಒಳ್ಳೆಯ ಪದಾರ್ಥವೇ, ಉಪ್ಪು ಸಪ್ಪೆಯಾದರೆ ಅದನ್ನು ಇನ್ಯಾತರಿಂದ ರುಚಿಗೊಳಿಸುವಿರಿ? ನಮ್ಮೊಳಗೆ ಉಪ್ಪು ಇರಲಿ, ಒಬ್ಬರಿಗೊಬ್ಬರು ಸಮಾಧಾನದಿಂದಿರಿ.'' ಮಾರ್ಕ 9:49.

11. ''ಭೂಲೋಕದಲ್ಲಿ ಮನುಷ್ಯರೊಳಗೆ ಸಮಾಧಾನ, ದೇವರು ಅವರಿಗೆ ಒಲಿಯುತ್ತಾನೆ.'' ಲೂಕ 2:14.

12. ''ನೀನಾದರೋ ಸಮಾಧಾನಕ್ಕೆ ಬೇಕಾದದ್ದನ್ನು ಇದೇ ದಿನದಲ್ಲಿ ತಿಳಿದುಕೊಂಡರೆ ಎಷ್ಟೋ ಒಳ್ಳೇದು.'' ಲೂಕ 19:42.

13. ''ಆತನು ಈ ಸಂಗತಿಯನ್ನು ಕುರಿತು ಮಾತಾಡುತ್ತಿರುವಾಗ

ಆತನೇ ಅವರ ನಡುವೆ ನಿಂತು- ನಿಮಗೆ ಮನಶ್ಶಾಂತಿ ಯಾಗಲಿ ಎಂದು ಅವರಿಗೆ ಹೇಳಿದನು'' ಲೂಕ 24:36.

14. ''ಶಾಂತಿಯನ್ನು ನಿಮಗೆ ಬಿಟ್ಟು ಹೋಗುತ್ತೇನೆ. ನನ್ನಲ್ಲಿರುವಂಥ ಶಾಂತಿಯನ್ನು ನಿಮಗೆ ಕೊಡುತ್ತೇನೆ.'' ಯೋಹಾ.14:27.

15. ''ಒಬ್ಬನು ವಾಕ್ಯವನ್ನು ಕೇಳಿದ ಕೂಡಲೇ ಸಂತೋಷದಿಂದ ಅದನ್ನು ಸ್ವೀಕರಿಸುತ್ತಾನೆ.'' ಮತ್ತಾ.13:20.

16. ''ಪರಲೋಕ ರಾಜ್ಯವು ಹೊಲದಲ್ಲಿ ಹೂಳಿಟ್ಟ ದ್ರವ್ಯಕ್ಕೆ ಹೋಲಿಕೆಯಾಗಿದೆ. ಒಬ್ಬನು ಅದನ್ನು ಕಂಡುಕೊಂಡು ಮುಚ್ಚಿಬಿಟ್ಟು ಅದರಿಂದಾದ ಸಂತೋಷದಿಂದ ತನ್ನ ಬದುಕನ್ನೆಲ್ಲಾ ಮಾರಿ ಆ ಹೊಲವನ್ನು ಕೊಂಡುಕೊಂಡನು.'' ಮತ್ತಾ.13:44.

17. ''ಅದು ಸಿಕ್ಕಿದರೆ ತಪ್ಪಿಸಿಕೊಳ್ಳದೆ ಇರುವ ತೊಂಭತ್ತೊಂಭತ್ತು ಕುರಿಗಳಿಗಿಂತ ಆ ಒಂದಕ್ಕೋಸ್ಕರ ಹೆಚ್ಚಾಗಿ ಸಂತೋಷ ಪಡುವನೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ.'' ಮತ್ತಾ.18:13.

18. ''ಸಿಕ್ಕಿದ ಮೇಲೆ ಆಕೆಯು ತನ್ನ ಗೆಳತಿಯರನ್ನೂ ನೆರೆ ಹೊರೆಯವರನ್ನೂ ಕೂಡಿಸಿ ಹೋಗಿದ್ದ ಪಾವಲಿ ಸಿಕ್ಕಿತು. ನನ್ನ ಸಂಗಡ ಸಂತೋಷಿಸಿರಿ ಎಂದು ಅವರಿಗೆ ಹೇಳುವಳಲ್ಲವೇ?'' ಲೂಕ 15:9.

19. ''ಕೊಬ್ಬಿಸಿದ ಆ ಕರುವನ್ನು ತಂದು ಕೊಯ್ಯಿರಿ, ಹಬ್ಬ ಮಾಡೋಣ, ಉಲ್ಲಾಸ ಪಡೋಣ, ಈ ನನ್ನ ಮಗನು

ಸತ್ತವನಾಗಿದ್ದನು. ತಿರಿಗಿ ಬದುಕಿ ಬಂದನು, ಪೋಲಿ ಹೋಗಿದ್ದನು, ಸಿಕ್ಕಿದನು ಎಂದು ಹೇಳಿದನು.ಆಗ ಅವರು ಉಲ್ಲಾಸ ಪಡುವದಕ್ಕೆ ತೊಡಗಿದರು'' ಲೂಕ 15:24.

20. ''ಮದಲಗಿತ್ತಿಯುಳ್ಳವನೇ ಮದಲಿಂಗನು; ಆದರೂ ಮದಲಿಂಗನ ಗೆಳೆಯನು ಅವನ ಹತ್ತರ ನಿಂತುಕೊಂಡು ಅವನ ಮಾತುಗಳನ್ನು ಕೇಳಿ ಮದಲಿಂಗನ ಧ್ವನಿಗೆ ಬಹು ಸಂತೋಷ ಪಡುತ್ತಾನಲ್ಲವೇ. ಇದರಂತೆ ನನಗಿರುವ ಸಂತೋಷ - ಅದು ನೆರವೇರಿತು.'' ಯೋಹಾ 3:29.

## 33. ಯಜಮಾನನೂ ನೀತಿವಂತನೂ

1. ''ಯಾವನೂ ಇಬ್ಬರು ಯಜಮಾರಿಗೆ ಸೇವೆಮಾಡಲಾರನು. ಅವನು ಒಬ್ಬನನ್ನು ದ್ವೇಷಿಸಿ ಮತ್ತೊಬ್ಬನನ್ನು ಪ್ರೀತಿಸುವನು.'' ಮತ್ತಾ 6:24.

2. ''ಗುರುವಿನಂತೆ ಆಗುವದು ಶಿಷ್ಯನಿಗೆ ಸಾಕು; ದಣಿಯಂತೆ ಆಗುವದು ಆಳಿಗೆ ಸಾಕು.'' ಮತ್ತಾ 10:25.

3. ''ಬೆಳೆಯು ಬಹಳ, ಕೆಲಸದವರು ಸ್ವಲ್ಪ; ಆದುದರಿಂದ ಬೆಳೆಯ ಯಜಮಾನನನ್ನು ನಿನ್ನ ಬೆಳೆಗೆ ಕೆಲಸದವರನ್ನು ಕಳುಹಿಸಬೇಕೆಂದು ಬೇಡಿಕೊಳ್ಳಿರಿ ಎಂದು ಹೇಳಿದನು.'' ಮತ್ತಾ.9:38.

4. ''ಕಳ್ಳನು ಬರುವ ಜಾವ ಮನೆಯ ಯಜಮಾನನಿಗೆ ತಿಳಿದಿದ್ದರೆ ಅವನು ಎಚ್ಚರವಾಗಿದ್ದು ತನ್ನ ಮನೆಗೆ ಕನ್ನಾ ಹಾಕಗೊಡಿಸುತ್ತಿರಲಿಲ್ಲ'' ಮತ್ತಾ.24:43.

5. "ಹಾಗಾದರೆ ಯಜಮಾನನು ತನ್ನ ಮನೆಯವರಿಗೆ ಹೊತ್ತು ಹೊತ್ತಿಗೆ ಆಹಾರ ಕೊಡಲಿಕ್ಕೆ ಅವರ ಮೇಲಿಟ್ಟ ನಂಬಿಗಸ್ತನೂ ವಿವೇಕಿಯೂ ಆದಂಥ ಆಳು ಯಾರು? ಮತ್ತಾ.24:45.

6. "ಯಜಮಾನನು ಬಂದು ಯಾವ ಆಳು ಹೀಗೆ ಮಾಡುವದನ್ನು ಕಾಣುವನೋ ಆ ಆಳು ಧನ್ಯನು" ಮತ್ತಾ 24:46.

7. "ಮನೇ ಯಜಮಾನನು ಸಂಜೇ ಹೊತ್ತಿನಲ್ಲೋ ಸರು ಹೊತ್ತಿನಲ್ಲೋ ಕೋಳಿ ಕೂಗುವಾಗಲೋ ಮುಂಜಾನೆಯಲ್ಲೋ ಯಾವಾಗ ಬರುತ್ತಾನೋ ನಿಮಗೆ ಗೊತ್ತಿಲ್ಲದ ಕಾರಣ ಎಚ್ಚರವಾಗಿರಿ;" ಮಾರ್ಕ 13:35.

8. "ಹೊತ್ತು ಹೊತ್ತಿಗೆ ಅಶನಕ್ಕೆ ಬೇಕಾದದ್ದನ್ನು ಅಳೆದು ಕೊಡುವದಕ್ಕಾಗಿ ಯಜಮಾನನು ತನ್ನ ಮನೆಯವರ ಮೇಲೆ ನೇಮಿಸಿದ ನಂಬಿಗಸ್ತನೂ ವಿವೇಕಿಯೂ ಆಗಿರುವ ಮನೇವಾರ್ತೆಯವನು ಯಾರು?" ಲೂಕ 12:42.

9. "ತನ್ನ ಯಜಮಾನನ ಚಿತ್ತವನ್ನು ತಿಳಿದ ಆಳು ಸಿದ್ಧಮಾಡದೆ ಹೋದರೆ ಅಥವ ಅವನ ಚಿತ್ತಕ್ಕನುಸಾರವಗಿ ನಡೆಯದಿದ್ದರೆ ಅವನು ಬಹಳ ಪೆಟ್ಟು ತಿನ್ನುವನು" ಲೂಕ 12:47.

10. "ನೀವಂತೂ ತಮ್ಮ ಯಜಮಾನನು ಬಂದು ತಟ್ಟಿದ ಕೂಡಲೇ ಕದವನ್ನು ತೆರೆಯುವದಕ್ಕೆ ಸಿದ್ಧವಾಗಿದ್ದು ಮದುವೇ ಊಟವನ್ನು ಯಾವಾಗ ತೀರಿಸಿಕೊಂಡು ಬರುವನೋ ಎಂದು ಅವನನ್ನು ಎದುರು ನೋಡುತ್ತಿರುವ ಮನುಷ್ಯರಂತಿರಿ." ಲೂಕ 12:36.

11. "ಇನ್ನು ಮೇಲೆ ನಾನು ನಿಮ್ಮನ್ನು ಆಳುಗಳನ್ನುವದಿಲ್ಲ, ಯಜಮಾನನು ಮಾಡುವಂಥದ್ದು ಆಳಿಗೆ ತಿಳಿಯುವದಿಲ್ಲ." ಯೋಹಾ 15:15.

12. "ನಿನ್ನ ಮಾತುಗಳಿಂದಲೇ ನೀತಿವಂತನೆಂದು ತೀರ್ಪು ಹೊಂದುವಿ; ನಿನ್ನ ಮಾತುಗಳಿಂದಲೇ ಅಪರಾಧಿ ಎಂದು ತೀರ್ಪು ಹೊಂದುವಿ" ಮತ್ತಾ 12:37.

13. " ಪ್ರವಾದಿಯನ್ನು ಪ್ರವಾದಿಯೆಂದು ಸೇರಿಸಿಕೊಳ್ಳುವವನು ಪ್ರವಾದಿಗೆ ಬರತಕ್ಕ ಪ್ರತಿಫಲವನ್ನು ಹೊಂದುವನು; ನೀತಿವಂತನನ್ನು ನೀತಿವಂತನೆಂದು ಸೇರಿಸಿಕೊಳ್ಳುವವನು ನೀತಿವಂತನಿಗೆ ಬರತಕ್ಕ ಪ್ರತಿಪಲವನ್ನು ಹೊಂದುವನು" ಮತ್ತಾ.10:41.

14. "ನೀತಿವಂತರು ತಮ್ಮ ತಂದೆಯ ರಾಜ್ಯದಲ್ಲಿ ಸೂರ್ಯನಂತೆ ಪ್ರಕಾಶಿಸುವರು"ಮತ್ತಾ.13:43.

15. "ನಾನು ನೀತಿವಂತರನ್ನು ಕರೆಯುವದಕ್ಕೆ ಬಂದವನಲ್ಲ, ಪಾಪಿಗಳನ್ನು ಕರೆಯುವದಕ್ಕೆ ಬಂದವನು" ಮತ್ತಾ.9:13.

16. "ಹಾಗೆಯೇ ಯುಗದ ಸಮಾಪ್ತಿಯಲ್ಲಿ ಆಗುವದು. ದೇವದೂತರು ಹೊರಟು ಬಂದು ನೀತಿವಂತರೊಳಗಿಂದ ಕೆಟ್ಟವರನ್ನು ಬೇರೆ ಮಾಡಿ ಅವರನ್ನು ಬೆಂಕಿಕೊಂಡದಲ್ಲಿ ಹಾಕುವರು" ಮತ್ತಾ.13:49.

17. "ನೀತಿವಂತನಾದ ಹೇಬೆಲನ ರಕ್ತವು ಮೊದಲುಗೊಂಡು ನೀವು ದೇವಾಲಯಕ್ಕೂ ಯಜ್ಞವೇದಿಗೂ ನಡುವೆ ಕೊಂದು

ಹಾಕಿದ ಬರಕೀಯನ ಮಗನಾದ ಜಕರೀಯನ ರಕ್ತದವರೆಗೂ
ಭೂಮಿಯ ಮೇಲೆ ಸುರಿಸಲ್ಪಟ್ಟ ಎಲ್ಲಾ ನೀತಿವಂತರ
ರಕ್ತದಿಂದುಂಟ್ಮಾದ ಅಪರಾಧವು ನಿಮ್ಮ ತಲೆಯ ಮೇಲೆ
ಬರುವದು.'' ಮತ್ತಾ.23:35.

18. ''ಅವನು ತನ್ನನ್ನು ನೀತಿವಂತನೆಂದು ತೋರಿಸಿಕೊಳ್ಳುವದಕ್ಕೆ
ಅಪೇಕ್ಷಿಸಿ, ನನ್ನ ನೆರೆಯವನು ಯಾರು ಎಂದು
ಯೇಸುವನ್ನು ಕೇಳಲು...'' ಲೂಕ 10:29

19. ''ಇದಲ್ಲದ ತಾವೇ ನೀತಿವಂತರೆಂದು ತಮ್ಮಲ್ಲಿ ಭರವಸ
ವಿಟ್ಟುಕೊಂಡು ಉಳಿದವರನ್ನು ಉದಾಸೀನ ಮಾಡುವಂತ
ಕೆಲವರಿಗೆ ಒಂದು ಸಾಮ್ಯವನ್ನು ಹೇಳಿದನು.'' ಲೂಕ 18:9

20. ''ಸುಂಕದವನು ದೂರದಲ್ಲಿ ನಿಂತು ಆಕಾಶದ ಕಡೆಗೆ ಕಣ್ಣೆತ್ತಿ
ನೋಡುವದಕ್ಕೂ ಮನಸ್ಸಿಲ್ಲದೆ ಎದೆಯನ್ನು ಬಡಿದು
ಕೊಳ್ಳುತ್ತಾ ದೇವರೇ, ಪಾಪಿಯಾದ ನನ್ನನ್ನು ಕರುಣಿಸು
ಅಂದನು. ಇವನು ನೀತಿವಂತನೆಂದು ನಿರ್ಣಯಿಸಲ್ಪಟ್ಟ
ವನಾಗಿ ಮನೆಗೆ ಹೋದನು.'' ಲೂಕ 18:13,14

## 34. ಚಿಕ್ಕ ಮಕ್ಕಳೂ, ದೇವದೂತರೂ

1. ''ಈ ಚಿಕ್ಕವರಲ್ಲಿ ಒಬ್ಬನನ್ನಾದರೂ ತಾತ್ಸಾರ
ಮಾಡಬಾರದು ನೋಡಿರಿ'' ಮತ್ತಾ.18:10

2. ''ಪರಲೋಕದಲ್ಲಿ ಅವರ ದೂತರು ತಂದೆಯ ಮುಖವನ್ನು
ಯಾವಾಗಲೂ ನೋಡುತ್ತಲಿದ್ದಾರೆ.'' ಮತ್ತಾ.18:11

3. ''ನೀವು ತಿರಿಗಿಕೊಂಡು ಚಿಕ್ಕ ಮಕ್ಕಳಂತೆ ಆಗದೆ ಹೋದರೆ

ನೀವು ಪರಲೋಕ ರಾಜ್ಯದಲ್ಲಿ ಸೇರುವದೇ ಇಲ್ಲ." ಮತ್ತಾ18:3

4. "ಯಾವನು ಈ ಚಿಕ್ಕ ಮಗುವಿನಂತೆ ತನ್ನನ್ನು ತಗ್ಗಿಸಿಕೊಳ್ಳುತ್ತಾನೋ, ಅವನೇ ಪರಲೋಕದಲ್ಲಿ ಹೆಚ್ಚಿನವನು." ಮತ್ತಾ.18:4

5. "ಯಾವನಾದರು ನನ್ನ ಹೆಸರಿನಲ್ಲಿ ಇಂಥ ಒಂದು ಚಿಕ್ಕ ಮಗುವನ್ನು ಸೇರಿಸಿಕೊಂಡರೆ ನನ್ನನ್ನು ಸೇರಿಸಿಕೊಂಡ ಹಾಗಾಯಿತು." ಮತ್ತಾ.18:5

6. "ನನ್ನಲ್ಲಿ ನಂಬಿಕೆಯಿಡುವ ಈ ಚಿಕ್ಕವರಲ್ಲಿ ಒಬ್ಬನಿಗೆ ಯಾವನಾದರು ಅಡ್ಡಿಯಾದರೆ ಅಂಥವನ ಕೊರಳಿಗೆ ಬೀಸುವ ಕಲ್ಲು ಕಟ್ಟಿ ಅವನನ್ನು ಆಳವಾದ ಸಮುದ್ರದಲ್ಲಿ ಮುಳುಗಿಸಿ ಬಿಡುವದು ಅವನಿಗೆ ಹಿತವಾಗುವದು." ಮತ್ತಾ.18:6

7. "ಈ ಚಿಕ್ಕ ಮಕ್ಕಳಲ್ಲಿ ಒಬ್ಬನಾದರೂ ಕೆಟ್ಟು ಹೋಗುವದು ಪರಲೋಕದಲ್ಲಿರುವ ನಿಮ್ಮ ತಂದೆಯ ಚಿತ್ತವಲ್ಲ." ಮತ್ತಾ.18:14

8. "ಸ್ತ್ರೀಯರಲ್ಲಿ ಹುಟ್ಟಿದವರೊಳಗೆ ಯೋಹಾನನಿಗಿಂತ ದೊಡ್ಡವನು ಒಬ್ಬನೂ ಇಲ್ಲ; ಆದರೂ ದೇವರ ರಾಜ್ಯದಲ್ಲಿ ಚಿಕ್ಕವನು ಅವನಿಗಿಂತಲೂ ದೊಡ್ಡವನು." ಲೂಕ 7:28

9. "ನಿಮ್ಮೆಲ್ಲರಲ್ಲಿ ಯಾವನು ಚಿಕ್ಕವನೋ ಅವನೇ ದೊಡ್ಡವನು." ಲೂಕ 9:48

10. "ಯೇಸು ಅವರ ಮನಸ್ಸಿನ ವಿಚಾರವನ್ನು ತಿಳುಕೊಂಡು ಒಂದು ಚಿಕ್ಕ ಮಗುವನ್ನು ಹಿಡಿದುಕೊಂಡು ತನ್ನ ಬಳಿಯಲ್ಲಿ ನಿಲ್ಲಿಸಿ, ಅವರಿಗೆ - ಯಾವನಾದರೂ ನನ್ನ ಹೆಸರಿನಲ್ಲಿ ಈ ಚಿಕ್ಕ ಮಗುವನ್ನು ಸೇರಿಸಿಕೊಂಡರೆ ನನ್ನನ್ನು ಸೇರಿಸಿಕೊಂಡ ಹಾಗಾಯಿತು." ಲೂಕ 9:47,48

11. "ಈ ನನ್ನ ಸಹೋದರರಲ್ಲಿ ಕೇವಲ ಅಲ್ಪನಾದವನೊಬ್ಬನಿಗೆ ಏನೇನು ಮಾಡಿದರೋ ಅದನ್ನು ನನಗೂ ಮಾಡಿದ ಹಾಗಾಯಿತು." ಮತ್ತಾ.25:40

12. "ನಾನು ನಿಮಗೆ ಹೇಳುತ್ತೇನೆ, ಯಾವನು ಮನುಷ್ಯರ ಮುಂದೆ ತಾನು ಯೇಸುವಿನವನೆಂದು ಒಪ್ಪಿಕೊಳ್ಳುವನೋ ಮನುಷ್ಯ ಕುಮಾರನು ಸಹ ಅವನನ್ನು ದೇವದೂತರ ಮುಂದೆ ತನ್ನವನೆಂದು ಒಪ್ಪಿಕೊಳ್ಳುವನು." ಲೂಕ 12:8

13. "ಆದರೆ ಯಾವನು ಮನುಷ್ಯರ ಮುಂದೆ ತಾನು ಯೇಸುವಿನವನಲ್ಲವೆಂದು ಹೇಳುವನೋ ಅವನನ್ನು ನಾನು ದೇವದೂತರ ಮುಂದೆ ನನ್ನವನಲ್ಲವೆಂದು ಹೇಳುವೆನು." ಲೂಕ 12:9

14. "ಯಾವನು ನನಗೂ ನನ್ನ ಮಾತುಗಳಿಗೂ ನಾಚಿಕೊಳ್ಳುತ್ತಾನೋ ಅವನಿಗೆ ಮನುಷ್ಯ ಕುಮಾರನು, ತಾನು ತನ್ನ ತಂದೆಯ ಪ್ರಭಾವದೊಡನೆ ಪರಿಶುದ್ಧ ದೇವದೂತರ ಸಮೇತವಾಗಿ ಬರುವಾಗ ನಾಚಿಕೊಳ್ಳುವನು ಅಂದನು." ಮಾರ್ಕ 8:38

15. "ಪರಲೋಕವು ತೆರೆದಿರುವದನ್ನೂ ಮನುಷ್ಯ ಕುಮಾರನ

ಮೇಲೆ ದೇವದೂತರು ಏರಿ ಹೋಗುತ್ತಾ ಇಳಿದು ಬರುತ್ತಾ ಇರುವದನ್ನೂ ನೋಡುವಿರಿ.'' ಯೋಹಾ.1:51

16. ''ಸುಗ್ಗೀಕಾಲ ಅಂದರೆ ಯುಗದ ಸಮಾಪ್ತಿ; ಕೊಯ್ಯುವವರು ಅಂದರೆ ದೇವದೂತರು.'' ಮತ್ತಾ.13:39

17. ''ಮನುಷ್ಯ ಕುಮಾರನು ತನ್ನ ದೂತರನ್ನು ಕಳುಹಿಸುವನು, ಅವರು ಆತನ ರಾಜ್ಯದೊಳಗಿನ ಎಲ್ಲಾ ಕಂಟಕರನ್ನೂ ಅಧರ್ಮಿಗಳನ್ನೂ ಕುಡಿಸಿ ಬೆಂಕಿಯಕೊಂಡದಲ್ಲಿ ಹಾಕುವರು.'' ಮತ್ತಾ.13:41

18. ''ಮನುಷ್ಯಕುಮಾರನು ತನ್ನ ಮಹಿಮೆಯಿಂದ ಎಲ್ಲಾ ದೇವದೂತರೊಂದಿಗೆ ಕೂಡಿ ಬರುವಾಗ ತನ್ನ ಮಹಿಮೆಯ ಸಿಂಹಾಸನದಲ್ಲಿ ಕೂತುಕೊಳ್ಳುವನು.'' ಮತ್ತಾ.25:31

19. ''ಆತನು ತುತೂರಿಯ ಮಹಾ ಶಬ್ಧದಿಂದ ತನ್ನ ದೂತರನ್ನು ಕಳುಹಿಸುವನು. ಅವರು ಆತನು ಆದುಕೊಂಡವರನ್ನು ಆಕಾಶದ ಒಂದು ಕಡೆಯಿಂದ ಮತ್ತೊಂದು ಕಡೆಯವರೆಗೆ ನಾಲ್ಕು ದಿಕ್ಕುಗಳಿಂದ ಒಟ್ಟುಗೂಡಿಸುವರು.'' ಮತ್ತಾ.24:31

20. ''ಆ ದಿನದ ವಿಷಯವೂ ಆ ಗಳಿಗೆಯ ವಿಷಯವೂ ನನ್ನ ತಂದೆಯೊಬ್ಬನಿಗೆ ತಿಳಿಯುವದೇ ಹೊರತು ಮತ್ತಾರಿಗೂ ತಿಳಿಯದು.'' ಮತ್ತಾ.24:36

## 35. ಸಿದ್ಧವಾಗಿರುವಿಕೆ.

1. ''ಪರಲೋಕ ರಾಜ್ಯವು ಆರತಿಗಳನ್ನು ತೆಗೆದುಕೊಂಡು

ಮದಲಿಂಗನನ್ನು ಎದರುಗೊಳ್ಳುವದಕ್ಕೆ ಹೊರಟಂಥ ಹತ್ತು ಮಂದಿ ಕನ್ಯೆಯರಿಗೆ ಹೋಲಿಕೆಯಾಗಿದೆ.'' ಮತ್ತಾ.25:1

2. ''ಅವರಲ್ಲಿ ಐದು ಮಂದಿ ಬುದ್ಧಿಯಿಲ್ಲದವರು , ಐದು ಮಂದಿ ಬುದ್ಧಿವಂತೆಯರು.'' ಮತ್ತಾ.25:2

3. ''ಬುದ್ಧಿವಂತೆಯರು ತಮ್ಮ ಆರತಿಗಳ ಕೂಡ ಪಾತ್ರೆಯಲ್ಲಿ ಎಣ್ಣೆ ತಕ್ಕೊಂಡರು.'' ಮತ್ತಾ.25:4

4. ''ಅರ್ಧ ರಾತ್ರಿಯಲ್ಲಿ - ಇಗೋ, ಮದಲಿಂಗನು! ಅವನನ್ನು ಎದುರುಗೊಳ್ಳುವದಕ್ಕೆ ಹೊರಡಿರಿ ಎಂಬ ಕೂಗಾಯಿತು.'' ಮತ್ತಾ.25:6

5. ''ಆಗ ಆ ಕನ್ಯೆಯರೆಲ್ಲರೂ ಎಚ್ಚತ್ತು ತಮ್ಮ ಆರತಿಗಳನ್ನು ನೆಟ್ಟಗೆ ಮಾಡಿದರು.'' ಮತ್ತಾ.25:7

6. ''ಆಗ್ಗೆ ಬುದ್ದಿಯಿಲ್ಲದವರು ಬುದ್ಧಿವಂತೆಯರಿಗೆ ನಿಮ್ಮ ಎಣ್ಣೆಯಲ್ಲಿ ನಮಗೆ ಸ್ವಲ್ಪ ಕೊಡಿರಿ. ನಮ್ಮ ಆರತಿಗಳು ಆರಿ ಹೋಗುತ್ತವೆ ಎಂದು ಹೇಳಿದರು.'' ಮತ್ತಾ.25:8,9

7. ''ಅದಕ್ಕೆ ಬುದ್ಧಿವಂತೆಯರು - ನಿಮಗೆ ಕೊಟ್ಟರೆ ನಮಗೂ ನಿಮಗೂ ಸಾಲದೆ ಹೋದೀತು ನೀವು ಮಾರುವವರ ಬಳಿಗೆ ಹೋಗಿ ಕೊಂಡುಕೊಂಡರೆ ಒಳ್ಳೇದು ಅಂದರು.'' ಮತ್ತಾ.25:9

8. ''ಅವರು ಕೊಂಡುಕೊಳ್ಳುವದಕ್ಕೆ ಹೋದಾಗ ಮದಲಿಂಗನು ಬಂದನು.'' ಮತ್ತಾ.25:10

9. ''ಸಿದ್ಧವಾಗಿದ್ದವರು ಅವನ ಸಂಗಡ ಮದುವೆಯ

ಮನೆಯೊಳಕ್ಕೆ ಹೋದರು. ಬಾಗಿಲು ಮುಚ್ಚಲಾಯಿತು.''
ಮತ್ತಾ.25:10

10. ''ತರುವಾಯ ಉಳಿದ ಕನ್ಯೆಯರು ಸಹ ಬಂದು - ಸ್ವಾಮೀ, ನಮಗೆ ಬಾಗಿಲು ತೆರೆಯಿರಿ ಅಂದರು.'' ಮತ್ತಾ.5:11

11. ''ಆತನು - ನಿಮ್ಮನ್ನು ನಾನರಿಯೆನೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂದನು.'' ಮತ್ತಾ.25:12

12. ''ಆದಕಾರಣ ಆ ದಿನವಾದರು ಗಳಿಗೆಯಾದರು ನಿಮಗೆ ಗೊತ್ತಿಲ್ಲವಾದದರಿಂದ ಎಚ್ಚರವಾಗಿರ್ರಿ.'' ಮತ್ತಾ.25:13

13. ''ಆ ಕಾಲವು ಯಾವಾಗ ಬರುವದೋ ನಿಮಗೆ ಗೊತ್ತಿಲ್ಲವಾದ್ದರಿಂದ ನೋಡಿಕೊಳ್ಳಿರಿ, ಜಾಗರೂಕರಾಗಿರಿ.'' ಮಾರ್ಕ 13:33

14. ''ಒಬ್ಬ ಮನುಷ್ಯನು ತನ್ನ ಮನೆಯನ್ನು ಬಿಟ್ಟು ಬೇರೊಂದು ದೇಶಕ್ಕೆ ಹೋಗುವಾಗ ತನ್ನ ಆಳುಗಳಿಗೆ ಮನೇ ಆಡಳಿತವನ್ನು ಒಪ್ಪಿಸಿಕೊಟ್ಟು ಒಬ್ಬೊಬ್ಬನಿಗೆ ಅವನವನ ಕೆಲಸವನ್ನು ನೇಮಿಸಿ ಬಾಗಿಲು ಕಾಯುವವನನ್ನು ಕರೆದು - ನೀನು ಎಚ್ಚರವಾಗಿರಬೇಕೆಂದು ನಾನು ಅಪ್ಪಣೆ ಕೊಡುತ್ತೇನೆ.'' ಮಾರ್ಕ 13:34

15. ''ಯಾವ ಯಾವ ಆಳುಗಳು ಎಚ್ಚರವಾಗಿರುವದನ್ನು ಕಂಡು ಕೊಳ್ಳುವನೋ ಆ ಆಳುಗಳೇ ಧನ್ಯರು.'' ಲೂಕ 12:37

16. ''ನೀವು ಪೂರ್ಣ ಶಕ್ತರಾಗುವಂತೆ ಎಲ್ಲಾ ಕಾಲದಲ್ಲಿಯೂ ದೇವರಿಗೆ ವಿಜ್ಞಾಪನೆಮಾಡಿಕೊಳ್ಳುತ್ತಾ ಎಚ್ಚರವಾಗಿರ್ರಿ.'' ಲೂಕ 21:36

17. ''ನಿಮ್ಮ ವಿಷಯದಲ್ಲಿ ಜಾಗರೂಕರಾಗಿರ್ರಿ. ಅತಿ ಭೋಜನದ ಮದಡಿನಿಂದಲೂ ಅಮಲಿನಿಂದಲೂ ಪ್ರಪಂಚದ ಚಿಂತೆಗಳಿಂದಲೂ ನಿಮ್ಮ ಹೃದಯಗಳು ಭಾರವಾಗಿರಲಾಗಿ ಆ ದಿವಸವು ನಿಮ್ಮ ಮೇಲೆ ಉರ್ಲಿನಂತೆ ಫಕ್ಕನೆ ಬಂದೀತು.'' ಲೂಕ 21:34

18. ''ನನ್ನ ಪ್ರಾಣವು ಸಾಯುವಷ್ಟು ದುಃಖಕ್ಕೆ ಒಳಗಾಗಿದೆ; ನೀವು ಇಲ್ಲೇ ಇದ್ದು ನನ್ನ ಸಂಗಡ ಎಚ್ಚರವಾಗಿರ್ರಿ.'' ಮತ್ತಾ.26:38

19. ''ಒಂದು ಗಳಿಗೆಯಾದರೂ ನನ್ನ ಸಂಗಡ ಎಚ್ಚರ ವಾಗಿರಲಾರಿರಾ?'' ಮತ್ತಾ.26:40

20. ''ಶೋಧನೆಗೆ ಒಳಗಾಗದಂತೆ ಎಚ್ಚರವಾಗಿದ್ದು ಪ್ರಾರ್ಥಿಸಿರಿ.'' ಮತ್ತಾ.26:41

## 36. ಮಾನಸಾಂತರವೂ ಮನ ತಿರುಗುವಿಕೆಯೂ.

1. ''ಪರಲೋಕ ರಾಜ್ಯವು ಸಮೀಪಿಸಿತು; ದೇವರ ಕಡೆಗೆ ತಿರುಗಿಕೊಳ್ಳಿರಿ.'' ಮತ್ತಾ.4:17

2. ''ದೈವ ಕೋಪದಿಂದ ತಪ್ಪಿಸಿಕೊಳ್ಳುವದಕ್ಕೆ ನಿಮಗೆ ಉಪದೇಶ ಮಾಡಿದವರಾರು.'' ಮತ್ತಾ.3:7

3. ''ಮಹತ್ಕಾರ್ಯಗಳು ಬಹಳವಾಗಿ ನಡೆದ ಊರುಗಳು ದೇವರ ಕಡೆಗೆ ತಿರುಗಲಿಲ್ಲವೆಂದು ಅವುಗಳನ್ನು ಗದರಿಸತೊಡಗಿದನು.'' ಮತ್ತಾ.11:20

4. "ಅಯ್ಯೋ, ಖೊರಜಿನೇ, ಅಯ್ಯೋ, ಬೆತ್ಸಾಯಿದವೇ, ನಿಮ್ಮಲ್ಲಿ ನಡೆದ ಮಹತ್ಕಾರ್ಯಗಳು ತೂರ್ ಮತ್ತು ಸಿದೋನ್ ಪಟ್ಟಣಗಳಲ್ಲಿ ನಡೆದಿದ್ದರೆ ಅಲ್ಲಿಯವರು ಆಗಲೇ ಗೋಣಿತಟ್ಟು ಹೊದ್ದುಕೊಂಡು ಬೂದಿಯಲ್ಲಿ ಕೂತುಕೊಂಡು ದೇವರ ಕಡೆಗೆ ತಿರುಗಿಕೊಳ್ಳುತ್ತಿದ್ದರು." ಮತ್ತಾ.11:21

5. "ನ್ಯಾಯವಿಚಾರಣೆಯ ದಿನದಲ್ಲಿ ನಿಮ್ಮ ಗತಿಗಿಂತಲೂ ತೂರ್ ಸಿದೋನ್ ಪಟ್ಟಣಗಳ ಗತಿಯು ಮೇಲಾಗಿರುವದು ಎಂದು ನಿಮಗೆ ಹೇಳುತ್ತೇನೆ." ಮತ್ತಾ.11:22

6. "ಎಲಾ, ಕಪೇರ್ನೌಮೇ, ನೀನು ಪರಲೋಕಕ್ಕೆ ಏರಿಸಲ್ಪಡುವಿಯಾ? ಪಾತಾಳಕ್ಕೆ ಇಳಿಯುವಿ. ನಿನ್ನಲ್ಲಿ ನಡೆದ ಮಹತ್ಕಾರ್ಯಗಳು ಸೋದೋಮಿನಲ್ಲಿ ನಡೆದಿದ್ದರೆ ಅದು ಇಂದಿನವರೆಗೂ ಉಳಿಯುತ್ತಿತ್ತು." ಮತ್ತಾ.11:23

7. "ನ್ಯಾಯ ವಿಚಾರಣೆಯಲ್ಲಿ ನಿನವೆ ಪಟ್ಟಣದವರು ಈ ಸಂತತಿಯವರೊಂದಿಗೆ ನಿಂತು ಇವರನ್ನು ಅಪರಾಧಿಗಳೆಂದು ಹೇಳುವರು, ಅವರು ಯೋನನು ಸಾರಿದ ವಾಕ್ಯವನ್ನು ಕೇಳಿ ದೇವರ ಕಡೆಗೆ ತಿರಿಗಿಕೊಂಡರು." ಮತ್ತಾ.12:41

8. "ನನ್ನ ಕಡೆಗೆ ತಿರಿಗಿಕೊಂಡು ನನ್ನಿಂದ ಸ್ವಸ್ಥತೆಯನ್ನು ಹೇಗೂ ಹೊಂದಬಾರದೆಂದು ಮಾಡಿಕೊಂಡಿದ್ದಾರೆ."ಮತ್ತಾ.13:15

9. "ಅವರು(ಶಿಷ್ಯರು) ಹೊರಟು ಹೋಗಿ ಜನರಿಗೆ - ದೇವರ ಕಡೆಗ ತಿರುಗಿಕೊಳ್ಳಬೇಕೆಂದು ಸಾರಿ, ಅನೇಕ ದೆವ್ವಗಳನ್ನು ಬಿಡಿಸಿದರು." ಮಾರ್ಕ 6:12

10. "ದೇವರ ಕಡೆಗೆ ತಿರಿಗಿಕೊಳ್ಳದಿದ್ದರೆ ನೀವೆಲ್ಲರೂ ಅವರಂತೆ ಹಾಳಾಗಿ ಹೋಗುವಿರಿ ಎಂದು ಹೇಳಿದನು." ಲೂಕ 13:5

11. "ತೋಟ ಮಾಡುವವನಿಗೆ - ನೋಡು, ನಾನು ಮೂರು ವರುಷಗಳಿಂದಲೂ ಈ ಅಂಜೂರದ ಮರದಲ್ಲಿ ಹಣ್ಣನ್ನು ಹುಡುಕುತ್ತಾ ಬಂದಿದ್ದೇನೆ; ಆದರೂ ನನಗೆ ಸಿಕ್ಕಲಿಲ್ಲ. ಇದನ್ನು ಕಡಿದು ಹಾಕು; ಇದರಿಂದ ಭೂಮಿಯೂ ಯಾಕೆ ಬಂಜೆಯಾಗಬೇಕು ಎಂದು ಹೇಳಿದನು." ಲೂಕ 13:7

12. "ನಿನ್ನ ಸಹೋದರನು ತಪ್ಪು ಮಾಡಿದರೆ ಅವನನ್ನು ಗದರಿಸು. ಅವನು ಪಶ್ಚಾತ್ತಾಪ ಪಟ್ಟರೆ, ಅವನ ತಪ್ಪನ್ನು ಕ್ಷಮಿಸಿ ಬಿಡು." ಲೂಕ 13:7

13. "ಯೋಹಾನನು ಧರ್ಮಮಾರ್ಗವನ್ನು ಬೋಧಿಸುವವನಾಗಿ ನಿಮ್ಮ ಬಳಿಗೆ ಬಂದನು. ನೀವು ಅವನನ್ನು ನಂಬಲಿಲ್ಲ. ಭ್ರಷ್ಟರು ಸೂಳೆಯರೂ ಅವನನ್ನು ನಂಬಿದರು. ನೀವು ಇದನ್ನು ನೋಡಿದಾಗ್ಯೂ ಪಶ್ಚಾತ್ತಾಪ ಪಡಲಿಲ್ಲ. ಅವನನ್ನು ನಂಬಲಿಲ್ಲ." ಮತ್ತಾ.21:32

14. "ನಿಮ್ಮ ಮನಸ್ಸು ದೇವರ ಕಡೆಗೆ ತಿರುಗಿತೆಂದು ತಕ್ಕ ಫಲದಿಂದ ತೋರಿಸಿರಿ." ಮತ್ತಾ.3:8

15. "ಆದರೆ ಫರಿಸಾಯರೂ ಧರ್ಮೋಪದೇಶಕರೂ ಆತನಿಂದ ದೀಕ್ಷಾಸ್ನಾನ ಮಾಡಿಸಿಕೊಳ್ಳದೆ ಹೋದದ್ದರಲ್ಲಿ ತಮ್ಮ ವಿಷಯವಾಗಿ ದೇವರ ಸಂಕಲ್ಪವನ್ನು ನಿರಾಕರಿಸಿದರು." ಲೂಕ 7:30.

16. "ದಿನಕ್ಕೆ ಏಳು ಸಾರಿ ನಿನಗೆ ತಪ್ಪು ಮಾಡಿ ಏಳು ಸಾರಿಯೂ

ನಿನ್ನ ಕಡೆಗೆ ತಿರಿಗಿಕೊಂಡು - ನನಗೆ ಪಶ್ಚಾತ್ತಾಪವಾಯಿತು ಎಂದು ಹೇಳಿದರೆ ಅವನಿಗೆ ಕ್ಷಮಿಸು.''ಲೂಕ 17:4

17. ''ಈ ಹೊತ್ತು ಈ ಮನೆಗೆ ರಕ್ಷಣೆಯಾಯಿತು; ಇವನು ಸಹ ಅಬ್ರಹಾಮನ ವಂಶಿಕನಲ್ಲವೇ? ಮನುಷ್ಯ ಕುಮಾರನು ಕೆಟ್ಟು ಹೋಗಿರುವದನ್ನು ಹುಡುಕಿ ರಕ್ಷಿಸುವದಕ್ಕೆ ಬಂದನು.'' ಲೂಕ 19:10

18. ''ದೇವರೇ, ಸುಲುಕೊಳ್ಳುವವರೂ ಅನ್ಯಾಯಗಾರರೂ ಹಾದರ ಮಾಡುವವರು ಆಗಿರುವ ಉಳಿದ ಜನರಂತೆ ನಾನಲ್ಲ; ಈ ಸುಂಕದವನಂತೆಯೂ ಅಲ್ಲ. ಆದುದರಿಂದ ನಿನಗೆ ಸ್ತೋತ್ರ ಮಾಡುತ್ತೇನೆ.'' ಲೂಕ 18:11

19. ''ಆದರೆ ಸುಂಕದವನು ದೂರದಲ್ಲಿ ನಿಂತು ಆಕಾಶದ ಕಡೆಗೆ ಕಣ್ಣೆತ್ತಿ ನೋಡುವದಕ್ಕೂ ಮನಸ್ಸಿಲ್ಲದೆ ಎದೆಯನ್ನು ಬಡಿದುಕೊಳ್ಳುತ್ತಾ - ದೇವರೇ ಪಾಪಿಯಾದ ನನ್ನನ್ನು ಕರುಣಿಸು ಅಂದನು.'' ಲೂಕ 18:13

20. ''ಇವನು ನೀತಿವಂತನೆಂದು ನಿರ್ಣಯಿಸಲ್ಪಟ್ಟವನಾಗಿ ತನ್ನ ಮನೆಗೆ ಹೋದನು. ಆ ಫರಿಸಯನು ಅಂಥವನಾಗಿ ಹೋಗಲಿಲ್ಲ.'' ಲೂಕ 18:14

## 37. ಸಂಧಾನವೂ ಕ್ಷಮಿಸುವಿಕೆಯೂ.

1. ''ನಿನ್ನ ಕಾಣಿಕೆಯನ್ನು ಯಜ್ಞವೇದಿಯ ಹತ್ತಿರಕ್ಕೆ ತಂದಾಗ ನಿನ್ನ ಸಹೋದರನ ಮನಸ್ಸಿನಲ್ಲಿ ನಿನ್ನ ಮೇಲೆ ಏನೋ ವಿರೋಧವಿದೆ ಎಂಬದು ನಿನ್ನ ನೆನಪಿಗೆ ಬಂದರೆ''

ಮತ್ತಾ.5:23

2. "ನಿನ್ನ ಕಾಣಿಕೆಯನ್ನು ಆ ಯಜ್ಞವೇದಿಯ ಮುಂದೆಯೇ ಬಿಟ್ಟು ಹೋಗಿ ಮೊದಲು ನಿನ್ನ ಸಹೋದರನ ಸಂಗಡ ಒಂದಾಗು, ಆ ಮೇಲೆ ಬಂದು ನಿನ್ನ ಕಾಣಿಕೆಯನ್ನು ಕೊಡು." ಮತ್ತಾ.5:24

3. "ತನ್ನ ಸಹೋದರನ ಮೇಲೆ ಸಿಟ್ಟುಗೊಳ್ಳುವ ಪ್ರತಿ ಮನುಷ್ಯನು ನ್ಯಾಯ ವಿಚಾರಣೆಗೆ ಗುರಿಯಾಗುವನು." ಮತ್ತಾ.5:22

4. "ನಿನ್ನ ವಾದಿಯ ಸಂಗಡ ಇನ್ನೂ ದಾರಿಯಲ್ಲಿರುವಾಗಲೇ ಅವನ ಕೂಡ ಬೇಗ ಸಮಾಧಾನ ಮಾಡಿಕೋ, ಇಲ್ಲದಿದ್ದರೆ ಆ ವಾದಿಯು ನಿನ್ನನ್ನು ನ್ಯಾಯಾಧಿಪತಿಗೆ ಒಪ್ಪಿಸಾನು."ಮತ್ತಾ.5:25

5. "ಆಗ ನೀನು ಸೆರೆಯಲ್ಲಿ ಬಿದ್ದೀಯೆ. ಒಂದು ಕಾಸನ್ನಾದರೂ ನಿಲ್ಲಿಸಿಕೊಳ್ಳದೆ ಎಲ್ಲಾ ಸಲ್ಲಿಸುವ ತನಕ ಅಲ್ಲಿಂದ ಬರುವದೇ ಇಲ್ಲ ಎಂದು ನಿನಗೆ ಸತ್ಯವಾಗಿ ಹೇಳುತ್ತೇನೆ." ಮತ್ತಾ.5:26

6. "ನಿನ್ನ ಸಹೋದರನು ತಪ್ಪು ಮಾಡಿದರೆ ನೀನು ಹೋಗಿ ನೀನೂ ಅವನು ಇಬ್ಬರೇ ಇರುವಾಗ ಅವನ ತಪ್ಪನ್ನು ಅವನಿಗೆ ತಿಳಿಸು." ಮತ್ತಾ.18:15

7. "ಅವನು ನಿನ್ನ ಮಾತನ್ನು ಕೇಳಿದರೆ ನಿನ್ನ ಸಹೋದರನನ್ನು ಸಂಪಾದಿಸಿಕೊಂಡಿರುವಿ." ಮತ್ತಾ.18:15

8. "ಅವನು ಕೇಳದೆ ಹೋದರೆ ಎರಡು ಮೂರು ಸಾಕ್ಷಿಗಳ ಬಾಯಿಂದ ಪ್ರತಿಯೊಂದು ಮಾತು ಸ್ಥಾಪನೆಯಾಗುವ ಹಾಗೆ ಇನ್ನೂ ಒಬ್ಬಿಬ್ಬರನ್ನು ನಿನ್ನ ಸಂಗಡ ಕರೆದುಕೊಂಡು ಹೋಗು." ಮತ್ತಾ.18:16

9. "ಅವನು ಅವರ ಮಾತನ್ನು ಕೇಳದೆ ಹೋದರೆ ಸಭೆಗೆ ಹೇಳು; ಆದರೆ ಸಭೆಯ ಮಾತನ್ನು ಕೇಳದೆ ಹೋದರೆ ಅವನು ನಿನಗೆ ಅಜ್ಞಾನಿಯಂತೆಯೂ ಭ್ರಷ್ಟನಂತೆಯೂ ಇರಲಿ." ಮತ್ತಾ.18:17

10. "ಭೂಲೋಕದಲ್ಲಿ ನೀವು ಏನೇನು ಕಟ್ಟುತ್ತೀರೋ ಅದು ಪರಲೋಕದಲ್ಲಿಯೂ ಕಟ್ಟಿರುವದು. ಭೂಲೋಕದಲ್ಲಿ ನೀವು ಏನೇನು ಬಿಚ್ಚುತ್ತೀರೋ ಅದು ಪರಲೋಕದಲ್ಲಿಯೂ ಬಿಚ್ಚಿರುವದು."ಮತ್ತಾ.8:18

12. "ಏಳು ಸಾರಿ ಎಂದಲ್ಲ ಏಳೆಪ್ಪತ್ತು ಸರಿ ಎಂದು ನಿಮಗೆ ಹೇಳುತ್ತೇನೆ." ಮತ್ತಾ.18:22

13. "ಪರಲೋಕ ರಾಜ್ಯವು ತನ್ನ ಸೇವಕರಿಂದ ಲೆಕ್ಕವನ್ನು ತೆಗೆದುಕೊಳ್ಳಬೇಕೆಂದಿದ್ದ ಒಬ್ಬ ಅರಸನಿಗೆ ಹೋಲಿಕೆಯಾಗಿದೆ." ಮತ್ತಾ.8:23

14. "ಅವನು ಲೆಕ್ಕ ತೆಗೆದುಕೊಳ್ಳುವದಕ್ಕೆ ಪ್ರಾರಂಭ ಮಾಡಿದಾಗ ಕೋಟ್ಯಾಂತರ ಸಾಲ ಮಾಡಿದವನೊಬ್ಬನನ್ನು ಅವನ ಬಳಿಗೆ ಹಿಡಿದು ತಂದರು" ಮತ್ತಾ.18:24

15. "ಆ ಸಾಲ ತೀರಿಸುವದಕ್ಕೆ ಅವನಲ್ಲಿ ಏನೂ ಇಲ್ಲದ್ದರಿಂದ ಅವನ ಒಡೆಯನು ಅವನನ್ನೂ ಅವನ ಹೆಂಡತಿ ಮಕ್ಕಳನ್ನೂ

ಅವನ ಬದುಕೆಲ್ಲವೂ ಮಾರಿ ಅದನ್ನು ತೀರಿಸಬೇಕೆಂದು ಅಪ್ಪಣೆ ಮಾಡಿದನು.'' ಮತ್ತಾ.18:25

16. ''ಆ ಸೇವಕನು ಅವನ ಕಾಲಿಗೆ ಬಿದ್ದು ಅವನಿಗೆ - ಒಡೆಯನೇ, ಸ್ವಲ್ಪ ತಾಳಿಕೋ, ನಿನ್ನದೆಲ್ಲಾ ನಾನು ಕೊಟ್ಟು ತೀರಿಸುತ್ತೇನೆಂದು ನಮಸ್ಕರಿಸಲಾಗಿ ಆ ಸೇವಕನ ಒಡೆಯನು ಕನಿಕರಪಟ್ಟು ಅವನನ್ನು ಬಿಡಿಸಿ, ಅವನ ಸಾಲವನ್ನೆಲ್ಲಾ ಬಿಟ್ಟುಬಿಟ್ಟನು.''ಮತ್ತಾ.18:26, 27

17. ''ಆ ಸೇವಕನು ಹೊರಗೆ ಬಂದು ತನಗೆ ನೂರು ಹಣಾ ಕೊಡಬೇಕಾಗಿದ್ದ ಒಬ್ಬ ಜೊತೇ ಸೇವಕನನ್ನು ಕಂಡು ಅವನನ್ನು ಹಿಡಿದು - ಎಲಾ, ನನ್ನ ಸಾಲ ತೀರಿಸು ಎಂದು ಹೇಳಿ ಕುತ್ತಿಗೆ ಹಿಡಿದನು.'' ಮತ್ತಾ.18:28

18. ''ಆಗ ಅವನ ಜೊತೆ ಸೇವಕನು ಅವನ ಕಾಲಿಗೆ ಬಿದ್ದು - ಸ್ವಲ್ಪ ತಾಳಿಕೋ. ತೀರಿಸುತ್ತೇನೆ ಎಂದು ಬೇಡಿಕೊಂಡನು. ಅದರೆ ಅವನು ಒಪ್ಪದೆ ಹೊರಟು ಹೋಗಿ ಆ ಸಾಲ ತೀರಿಸುವ ತನಕ ಅವನನ್ನು ಸೆರೆಮನೆಯಲ್ಲಿ ಹಾಕಿಸಿದನು.'' ಮತ್ತಾ.18:29,30

19. ''ಅವನ ಜೊತೇ ಸೇವಕರು ನಡೆದ ಸಂಗತಿಯನ್ನು ನೋಡಿ ಬಹಳವಾಗಿ ದುಃಖಪಟ್ಟು, ಒಡೆಯನ ಬಳಿಗೆ ಬಂದು ನಡೆದದ್ದನ್ನೆಲ್ಲಾ ತಿಳಿಸಿದರು. ಆಗ ಅವನ ಒಡೆಯನು ಅವನನ್ನು ಕರೆಸಿ - ಎಲಾ, ನೀಚನೇ, ನೀನು ನನ್ನನ್ನು ಬೇಡಿಕೊಂಡದ್ದರಿಂದ ಆ ಸಾಲವನ್ನೆಲ್ಲಾ ನಾನು ಬಿಟ್ಟುಬಿಟ್ಟೆನಲ್ಲಾ; ನಾನು ನಿನ್ನನ್ನು ಕರುಣಿಸಿದ ಹಾಗೆ ನೀನು ಸಹ

ನಿನ್ನ ಜೊತೇ ಸೇವಕನನ್ನು ಕರುಣಿಸಬಾರದಿತ್ತೇ ಎಂದು
ಹೇಳಿ ಸಿಟ್ಟು ಮಾಡಿದನು.'' ಮತ್ತಾ.18:31-33

20. ''ತನಗೆ ಕೊಡಬೇಕಾದ ಸಾಲವನ್ನು ತೀರಿಸುವ ತನಕ ಪೀಡಿಸುವವರ ಕೈಗೆ ಒಪ್ಪಿಸಿದನು. ನಿಮ್ಮಲ್ಲಿ ಪ್ರತಿಯೊಬ್ಬನು ತನ್ನ ಸಹೋದರನಿಗೆ ಮನಃಪೂರ್ವಕವಾಗಿ ಕ್ಷಮಿಸದೆ ಹೋದರೆ ಪರಲೋಕದಲ್ಲಿರುವ ನನ್ನ ತಂದೆಯೂ ನಿಮಗೆ ಹಾಗೆಯೇ ಮಾಡುವನು.'' ಮತ್ತಾ.18:35

## 38. ನೀತಿಯನ್ನು ನೆರವೇರಿಸುವಿಕೆ.

1. ''ಹೀಗೆ ನಾವು ಎಲ್ಲ ಧರ್ಮವನ್ನೂ ನೆರವೇರಿಸತಕ್ಕದ್ದಾಗಿದೆ.'' ಮತ್ತಾ.3:15

2. ''ನೀತಿಗೆ ಹಸಿದು ಬಾಯಾರಿದವರು ಧನ್ಯರು ಅವರಿಗೆ ತೃಪ್ತಿಯಾಗುವದು.'' ಮತ್ತಾ.5:6

3. ''ಮೋಶೆಯ ಧರ್ಮಶಾಸ್ತ್ರವನ್ನಾಗಲಿ ಪ್ರವಾದಿಗಳ ವಚನವನ್ನಾಗಲಿ ತೆಗೆದು ಹಾಕುವದಕ್ಕೆ ನಾನು ಬಂದೆನೆಂದು ನೆನಸಬೇಡಿರಿ. ತೆಗೆದು ಹಾಕುವದಕ್ಕೆ ಬಂದಿಲ್ಲ; ನೆರವೇರಿಸುವದಕ್ಕೆ ಬಂದಿದ್ದೇನೆ.'' ಮತ್ತಾ.5:17

4. ''ಈ ಆಜ್ಞೆಗಳಂತೆ ನಡೆದುಕೊಂಡು ಜನರಿಗೂ ಹಾಗೆ ಬೋಧಿಸುವವನು ಪರಲೋಕ ರಾಜ್ಯದಲ್ಲಿ ದೊಡ್ಡವನೆನಿಸಿಕೊಳ್ಳುವನು.'' ಮತ್ತಾ.5:19

5. ''ಹಾದರದ ಕಾರಣವಲ್ಲದೆ ತನ್ನ ಹೆಂಡತಿಯನ್ನು ಬಿಟ್ಟು

ಬಿಡುವವನು ಅವಳು ವ್ಯಭಿಚಾರ ಮಾಡುವದಕ್ಕೆ
ಕಾರಣನಾಗುತ್ತಾನೆ.'' ಮತ್ತಾ.5:32

6. ''ಬೆಳಕು ಲೋಕಕ್ಕೆ ಬಂದಿದ್ದರೂ ಮನುಷ್ಯರ ಕೃತ್ಯಗಳು ಕೆಟ್ಟವುಗಳಾಗಿರುವದರಿಂದ ಅವರು ಬೆಳಕಿಗಿಂತ ಕತ್ತಲೆಯನ್ನೇ ಹೆಚ್ಚಾಗಿ ಪ್ರೀತಿಸಿದರು.'' ಯೋಹಾ.3:19

7. ''ಕೆಟ್ಟದ್ದನ್ನು ಮಾಡುವವರು ಬೆಳಕನ್ನು ಸಹಿಸುವದಿಲ್ಲ, ತಮ್ಮ ಕೃತ್ಯಗಳು ದುಷ್ಕೃತ್ಯಗಳಾಗಿ ತೋರಿ ಬಂದಾವೆಂದು ಬೆಳಕಿಗೆ ಬರುವದಿಲ್ಲ.'' ಯೋಹಾ.3:20

8. ''ಸತ್ಯವನ್ನು ಅನುಸರಿಸಿ ನಡೆಯುವವನು ತಾನು ದೇವರಿಂದ ನಡಿಸಿಕೊಂಡು ತನ್ನ ಕೃತ್ಯಗಳನ್ನು ಮಾಡಿದ್ದೇನೆಂದು ತೋರಿಬರುವಂತೆ ಬೆಳಕಿಗೆ ಬರುತ್ತಾನೆ.'' ಯೋಹಾ.3:21

9. ''ಆತನು ಬಂದು ಪಾಪ ನೀತಿ ನ್ಯಾಯತೀರ್ವಿಕೆಯ ವಿಷಯಗಳಲ್ಲಿ ಲೋಕಕ್ಕೆ ಅರುಹನ್ನು ಹುಟ್ಟಿಸುವನು.'' ಯೋಹಾ.16:8

10. ''ಅವರು ನನ್ನನ್ನು ನಂಬದೆ ಇರುವದರಿಂದ ಪಾಪದ ವಿಷಯದಲ್ಲಿಯೂ, ನಾನು ತಂದೆಯ ಬಳಿಗೆ ಹೋಗಿ ಇನ್ನು ಮೇಲೆ ನಿಮಗೆ ಕಾಣಿಸದೆ ಇರುವದರಿಂದ ನೀತಿಯ ವಿಷಯದಲ್ಲಿಯೂ, ಇಹಲೋಕಾಧಿಪತಿಗೆ ನ್ಯಾಯತೀರ್ವಿಕೆಯಾದದರಿಂದ ನ್ಯಾಯತೀರ್ವಿಕೆಯ ವಿಷಯದಲ್ಲಿಯೂ ಲೋಕಕ್ಕೆ ಅರುಹನ್ನು ಹುಟ್ಟಿಸುವನು.'' ಯೋಹಾ.16:9,10,11

11. “ಕುರುಡರಿಗೆ ಕಣ್ಣು ಬರುತ್ತವೆ; ಕುಂಟರಿಗೆ ಕಾಲು ಬರುತ್ತದೆ. ಕುಷ್ಠ ರೋಗಿಗಳು ಶುದ್ಧರಾಗುತ್ತಾರೆ; ಕಿವುಡರಿಗೆ ಕಿವಿ ಬರುತ್ತದೆ. ಸತ್ತವರು ಜೀವವನ್ನು ಹೊಂದುತ್ತಾರೆ. ಬಡವರಿಗೆ ಸುವಾರ್ತೆ ಸಾರಲ್ಪಡುತ್ತದೆ; ನೀವು ಹೋಗಿ ಕಂಡು ಕೇಳಿದವುಗಳನ್ನು ಯೋಹಾನನಿಗೆ ತಿಳಿಸಿರಿ. ನನ್ನ ವಿಷಯದಲ್ಲಿ ಸಂಶಯ ಪಡದವನೇ ಧನ್ಯನು.” ಮತ್ತಾ.11:5,6

12. “ನೋಡು ನಿನ್ನ ಶಿಷ್ಯರು ಸಬ್ಬತ್ ದಿನದಲ್ಲಿ ಮಾಡಬಾರದ ಕೆಲಸವನ್ನು ಮಾಡುತ್ತಾರೆ ಎಂದು ಆತನಿಗೆ ಹೇಳಿದರು.” ಮತ್ತಾ.12:2

13. “ಆತನು, ಅವರಿಗೆ - ದಾವೀದನು ತಾನೂ ತನ್ನ ಸಂಗಡ ಇದ್ದವರೂ ಹಸಿದಾಗ ಏನು ಮಾಡಿದನೆಂಬದನ್ನು ನೀವು ಓದಿಲ್ಲವೋ; ಅವನು ದೇವರ ಮಂದಿರದೊಳಕ್ಕೆ ಹೋಗಿ ಯಾಜಕರು ಮಾತ್ರವೇ ಹೊರತು ತಾನಾಗಲಿ ತನ್ನ ಸಂಗಡ ಇದ್ದವರಾಗಲಿ ತಿನ್ನಬಾರದಾಗಿದ್ದ ನೈವೇದ್ಯದ ರೊಟ್ಟಿಗಳನ್ನು ತಿಂದನಲ್ಲವೇ.” ಮತ್ತಾ.12:4

14. “ಇದಲ್ಲದ ಸಬ್ಬತ್ ದಿನದಲ್ಲಿ ಯಾಜಕರು ದೇವಾಲಯದಲ್ಲಿ ಸಬ್ಬತ್ ದಿನವನ್ನು ಮಿಕ್ಕಾದ ದಿನಗಳಂತೆ ಮಾಡಿದಾಗ್ಯೂ ಅವರು ತಪ್ಪಿಗೆ ಗುರಿಯಾಗುವದಿಲ್ಲ. ಇದನ್ನು ನೀವು ಧರ್ಮಶಾಸ್ತ್ರದಲ್ಲಿ ಓದಿಲ್ಲವೋ.” ಮತ್ತಾ.12:5

15. “ನೀನು ನಿನ್ನ ಕಣ್ಣಿನಲ್ಲಿರುವ ತೊಲೆಯನ್ನು ಯೋಚಿಸದೆ

ನಿನ್ನ ಸಹೋದರನ ಕಣ್ಣಿನಲ್ಲಿರುವ ರವೆಯನ್ನು
ಯೋಚಿಸುವದೇಕೆ?'' ಮತ್ತಾ.7:3

16. ''ನೀನು ನಿನ್ನ ಸಹೋದರನಿಗೆ - ನಿನ್ನ ಕಣ್ಣಿನೊಳಗಿನಿಂದ ರವೆಯನ್ನು ತೆಗೆಯುತ್ತೇನೆ ಬಾ ಎಂದು ಹೇಳುವದು ಹೇಗೆ? ಮತ್ತಾ.7:4

17. ''ಕಪಟಿಯೇ, ಮೊದಲು ನಿನ್ನ ಕಣ್ಣಿನೊಳಗಿಂದ ತೊಲೆಯನ್ನು ತೆಗೆದು ಹಾಕಿಕೋ; ಆ ಮೇಲೆ ನಿನ್ನ ಸಹೋದರನ ಕಣ್ಣಿನೊಳಗಿಂದ ರವೆಯನ್ನು ತೆಗೆಯುವದಕ್ಕೆ ಚೆನ್ನಾಗಿ ಕಾಣಿಸುವದು.'' ಮತ್ತಾ.7:5

18. ''ಜನರು ನಿಮಗೆ ಏನೇನು ಮಾಡಬೇಕೆಂದು ಅಪೇಕ್ಷಿಸುತ್ತೀರೋ ಅದನ್ನೇ ನೀವು ಅವರಿಗೆ ಮಾಡಿರಿ. ಇದೇ ಧರ್ಮಶಾಸ್ತ್ರದ ಮತ್ತು ಪ್ರವಾದಿಗಳ ತಾತ್ಪರ್ಯ.''

19. ''ತೀರ್ಪು ಮಾಡಬೇಡಿರಿ; ಆಗ ನಿಮಗೂ ತೀರ್ಪಾಗುವದಿಲ್ಲ; ಅಪರಾಧಿಯೆಂದು ನಿರ್ಣಯಿಸಬೇಡಿರಿ, ಆಗ ನಿಮ್ಮನ್ನು ಅಪರಾಧಿಗಳೆಂದು ನಿರ್ಣಯಿಸುವದಿಲ್ಲ.'' ಲೂಕ 6:37

20. ''ಗುರವಿಗಿಂತ ಶಿಷ್ಯನು ದೊಡ್ಡವನಲ್ಲ; ಆದರೆ ತೀರಾ ಕಲಿತವನಾದ ಪ್ರತಿಯೊಬ್ಬನೂ ತನ್ನ ಗುರುವಿನಂತಾಗಿರುವನು.'' ಲೂಕ 6:40

## 39. ಕ್ರಿಸ್ತನ ಮರಣ ಪುನರುತ್ಥಾನ.

1. '' ಮನುಷ್ಯ ಕುಮಾರನು ಮನುಷ್ಯರ ಕೈಗೆ ಒಪ್ಪಿಸಿ ಕೊಡಲ್ಪಡುವನು. ಅವರು ಆತನನ್ನು ಕೊಲ್ಲುವರು; ಸತ್ತ

ಮೂರನೆಯ ದಿನದಲ್ಲಿ ಆತನು ಜೀವಿತವಾಗಿ ಎಬ್ಬಿಸಲ್ಪಡುವನು.'' ಮತ್ತಾ.17:23

2. ''ಮನುಷ್ಯ ಕುಮಾರನು ಹೊರಟು ಹೋಗುತ್ತಾನೆ ಸರಿ; ಹಾಗೆ ಆತನ ವಿಷಯವಾಗಿ ಬರೆದಿದೆಯಲ್ಲಾ; ಆದರೆ ಯಾವನು ಮನುಷ್ಯ ಕುಮಾರನನ್ನು ಹಿಡುಕೊಡುವನೋ ಅವನ ಗತಿಯನ್ನು ಏನು ಹೇಳಲಿ. ಆ ಮನುಷ್ಯನು ಹುಟ್ಟದಿದ್ದರೆ ಅವನಿಗೆ ಒಳ್ಳೇದಾಗಿತ್ತು.'' ಮಾರ್ಕ 14:21

3. ''ನೋಡಿರಿ, ನಾವು ಯೆರೂಸಲೇಮಿಗೆ ಹೋಗುತ್ತಾ ಇದ್ದೇವೆ, ಮತ್ತು ಮನುಷ್ಯ ಕುಮಾರನನ್ನು ಮಹಾಯಾಜಕರ ಮತ್ತು ಶಾಸ್ತ್ರಿಗಳ ಕೈಗೆ ಹಿಡುಕೊಡುವರು.'' ಮತ್ತಾ.40:3

4. ''ಅವರು ಆತನಿಗೆ ಮರಣ ದಂಡನೆಯನ್ನು ವಿಧಿಸಿ ಅವನನ್ನು ಅಪಹಾಸ್ಯ ಮಾಡುವದಕ್ಕೂ ಕೊರಡೆಗಳಿಂದ ಹೊಡೆಯುವದಕ್ಕೂ ಶಿಲುಬೆಗೆ ಹಾಕುವದಕ್ಕೂ ಅನ್ಯರ ಕೈಗೆ ಒಪ್ಪಿಸುವರು. ಅವನು ಸತ್ತು ಮೂರನೆಯ ದಿನದಲ್ಲಿ ಜೀವಿತನಾಗಿ ಎಬ್ಬಿಸಲ್ಪಡುವನು.'' ಮತ್ತಾ. 20:19

5. ''ನೀವೆಲ್ಲರು ಈ ರಾತ್ರಿ ನನ್ನ ವಿಷಯದಲ್ಲಿ ದಿಗಿಲುಪಟ್ಟು ಹಿಂಜರಿಯುವಿರಿ. ಕುರುಬನನ್ನು ಹೊಡೆಯುವೆನು; ಹಿಂಡಿನ ಕುರಿಗಳು ಚದರಿ ಹೋಗುವವು ಎಂದು ಬರೆದದೆಯಲ್ಲಾ.'' ಮತ್ತಾ.26:31

6. ''ಯೋನನು ಹೇಗೆ ಮೂರು ದಿನ ರಾತ್ರಿ ಹಗಲು ದೊಡ್ಡ

ಮೀನಿನ ಹೊಟ್ಟೆಯೊಳಗೆ ಇದ್ದನೋ, ಹಾಗೆಯೇ ಮನುಷ್ಯ ಕುಮಾರನು ಮೂರು ದಿನ ರಾತ್ರಿ ಹಗಲು ಭೂಗರ್ಭದೊಳಗೆ ಇರುವನು.'' ಮತ್ತಾ.12:40

7. ''ಆದಗ್ಯೂ ನಾನು ಜೀವಿತನಾಗಿ ಎದ್ದ ಮೇಲೆ ನಿಮ್ಮ ಮುಂದ ಗಲಿಲಾಯಕ್ಕೆ ಹೋಗುವೆನು.''ಮಾರ್ಕ 14:28

8. ''ನೀವಂತೂ ಈ ಮಾತುಗಳನ್ನು ನಿಮ್ಮ ಮನಸ್ಸಿನಲ್ಲಿ ಇಟ್ಟುಕೊಳ್ಳಿರಿ, ಯಾಕೆಂದರೆ ಮನುಷ್ಯ ಕುಮಾರನು ಮನುಷ್ಯರ ಕೈಗೆ ಒಪ್ಪಿಸಲ್ಪಡುವನು.'' ಲೂಕ 9:44

9. ''ಆತನು ಅಪರಾಧಿಗಳಂತೆ ಎಣಿಸಲ್ಪಟ್ಟನು ಎಂದು ಬರೆದಿರುವ ಮಾತು ನನ್ನಲ್ಲಿ ನೆರವೇರಬೇಕಾಗಿದೆ.'' ಲೂಕ 22:37

10. ''ಈ ದೇವಾಲಯವನ್ನು ಕೆಡವಿರಿ; ನಾನು ಮೂರು ದಿನದಲ್ಲಿ ಅದನ್ನು ಎಬ್ಬಿಸುವೆನು.'' ಯೋಹಾ.2:19

11. ''ನಿಮಗೆ ನಿಜ ನಿಜವಾಗಿ ಹೇಳುತ್ತೇನೆ; ನೀವು ಅಳುತ್ತ ಗೋಳಾಡುತ್ತಾ ಇರುವಿರಿ; ಆದರೆ ಲೋಕವು ಸಂತೋಷಿಸು ವದು. ನಿಮಗೆ ದುಃಖವಾಗುವದು ಆದರೆ ನಿಮ್ಮ ದುಃಖವು ಹೋಗಿ ಆನಂದ ಬರುವದು.'' ಯೋಹಾ.16:20

12. ''ಇನ್ನು ಸ್ವಲ್ಪಕಾಲ ನಾನು ನಿಮ್ಮಲ್ಲಿ ಇದ್ದು ಆ ಮೇಲೆ ನನ್ನನ್ನು ಕಳುಹಿಸಿದಾತನ ಬಳಿಗೆ ಹೊರಟು ಹೋಗುತ್ತೇನೆ.'' ಯೋಹಾ.7:33

13. ''ಇನ್ನು ಸ್ವಲ್ಪ ಕಾಲವಾದ ಮೇಲೆ ಲೋಕವು ನನ್ನನ್ನು

ನೋಡುವದಿಲ್ಲ. ಆದರೆ ನೀವು ನನ್ನನ್ನು ನೋಡುವಿರಿ; ನಾನು ಬದುಕುವದರಿಂದ ನೀವೂ ಬದುಕುವಿರಿ." ಯೋಹಾ.14:19

14. "ಈ ಮಾತುಗಳನ್ನು ನಾನು ಇನ್ನೂ ನಿಮ್ಮ ಬಳಿಯಲ್ಲಿರುವಾಗ ನಿಮಗೆ ಹೇಳಿದ್ದೇನೆ." ಯೋಹಾ.14:25

15. "ಆ ಸಹಾಯಕನು ಅಂದರೆ ಸತ್ಯದ ಆತ್ಮನು ನಿಮಗೆ ಎಲ್ಲವನ್ನು ಉಪದೇಶಿಸಿ ನಾನು ನಿಮಗೆ ಹೇಳಿದ್ದನ್ನೆಲ್ಲಾ ನಿಮ್ಮ ನೆನಪಿಗೆ ತರುವನು." ಯೋಹಾ.14:26

16. "ಶಾಂತಿಯನ್ನು ನಿಮಗೆ ಬಿಟ್ಟು ಹೋಗುತ್ತೇನೆ; ನನ್ನಲ್ಲಿರುವಂಥ ಶಾಂತಿಯನ್ನು ನಿಮಗೆ ಕೊಡುತ್ತೇನೆ; ಲೋಕವು ಕೊಡುವ ರೀತಿಯಿಂದ ನಾನು ನಿಮಗೆ ಕೊಡುವದಿಲ್ಲ. ನಿಮ್ಮ ಹೃದಯವು ಕಳವಳಗೊಳ್ಳದಿರಲಿ."ಯೋಹಾ.14:27

17. "ಈಗ ನಾನು ನನ್ನನ್ನು ಕಳುಹಿಸಿಕೊಟ್ಟಾತನ ಬಳಿಗೆ ಹೋಗುತ್ತೇನೆ. ನೀನು ಎಲ್ಲಿಗೆ ಹೋಗುತ್ತೀ ಎಂದು ನಿಮ್ಮಲ್ಲಿ ಒಬ್ಬನಾದರೂ ನನ್ನನ್ನು ಕೇಳುವದಿಲ್ಲ." ಯೋಹಾ.16:5

18. "ನಾನು ಹೋಗುವದು ನಿಮಗೆ ಹಿತಕರವಾಗಿದೆ. ಹೇಗೆಂದರೆ ನಾನು ಹೋಗದಿದ್ದರೆ ಆ ಸಹಾಯಕನು ನಿಮ್ಮ ಬಳಿಗೆ ಬರುವದಿಲ್ಲ; ನಾನು ಹೋದರೆ ಆತನನ್ನು ನಿಮ್ಮ ಬಳಿಗೆ ಕಳುಹಿಸಿ ಕೊಡುತ್ತೇನೆ." ಯೋಹಾನ 16:7

19. ''ಸ್ವಲ್ಪ ಕಾಲವಾದ ಮೇಲೆ ನಾನು ನಿಮಗೆ ಕಾಣುವದಿಲ್ಲ; ಅನಂತರ ಸ್ವಲ್ಪ ಕಾಲವಾದ ಮೇಲೆ ನನ್ನನ್ನು ನೋಡುವಿರಿ.'' ಯೋಹಾ.16:16

20. ''ನೋಡಿರಿ ನಿಮ್ಮಲ್ಲಿ ಒಬ್ಬೊಬ್ಬನೂ ತನ್ನ ತನ್ನ ಸ್ಥಳಕ್ಕೆ ಚದುರಿ ಹೋಗಿ ನನ್ನನ್ನು ಒಂಟಿಗನಾಗಿ ಬಿಡುವ ಕಾಲ ಬರುವದು. ಈಗ ಬಂದಿದೆ. ಆದರೆ ನಾನು ಒಂಟಿಗನಲ್ಲ.'' ಯೋಹಾ.16:32

## 40. ಜ್ಞಾನವೂ ತಿಳುವಳಿಕೆಯೂ.

1. ''ತೋಳಗಳ ನಡುವೆ ಕುರಿಮರಿಗಳನ್ನು ಹೊಗಿಸಿದಂತೆ ನಾನು ನಿಮ್ಮನ್ನು ಕಳುಹಿಸಿ ಕೊಡುತ್ತೇನೆ. ಆದುದರಿಂದ ಸರ್ಪಗಳಂತೆ ಜಾಣರೂ ಪಾರಿವಾಳಗಳಂತೆ ನಿಷ್ಕಪಟಿಗಳೂ ಆಗಿರ್ರಿ.'' ಮತ್ತಾ.10:16

2. ''ತಂದೆಯೇ, ಪರಲೋಕ ಭೂಲೋಕಗಳ ಒಡೆಯನೇ, ನೀನು ಜ್ಞಾನಿಗಳಿಗೂ ಬುದ್ಧಿವಂತರಿಗೂ ಈ ಮಾತುಗಳನ್ನು ಮರೆ ಮಾಡಿ ಬಾಲಕರಿಗೆ ಪ್ರಕಟ ಮಾಡಿದ್ದೀ ಎಂದು ನಿನ್ನನ್ನು ಕೊಂಡಾಡುತ್ತೇನೆ.'' ಮತ್ತಾ.11:25

3. ''ಒಬ್ಬನೇ ಸತ್ಯದೇವರಾಗಿರುವ ನಿನ್ನನ್ನೂ ನೀನು ಕಳುಹಿಸಿಕೊಟ್ಟ ಯೆಸು ಕ್ರಿಸ್ತನನ್ನೂ ತಿಳಿಯುವದೇ ನಿತ್ಯಜೀವವು.'' ಯೋಹಾ.17:3

4. ''ಪರಲೋಕ ರಾಜ್ಯದ ಗುಟ್ಟುಗಳನ್ನು ತಿಳಿಯುವ ವರವು

ನಿಮಗೆ ಕೊಟ್ಟಿದೆ; ಅವರಿಗೆ ಕೊಟ್ಟಿಲ್ಲ.'' ಮತ್ತಾ.13:11

5. ''ನಿನ್ನ ಮಾತುಗಳಿಂದಲೇ ನೀತಿವಂತನೆಂದು ತೀರ್ಪು ಹೊಂದುವಿ; ನಿನ್ನ ಮಾತುಗಳಿಂದಲೇ ಅಪರಾಧಿಯೆಂದು ತೀರ್ಪು ಹೊಂದುವಿ.'' ಮತ್ತಾ.12:37

6. ''ನಿಮ್ಮ ವಿರೋಧಿಗಳೆಲ್ಲರೂ ಎದುರು ನಿಲ್ಲುವದಕ್ಕೂ ಎದುರು ಮಾತಾಡುವದಕ್ಕೂ ಆಗದಂಥ ಬಾಯನ್ನು ಬುದ್ಧಿಯನ್ನೂ ನಾನೇ ನಿಮಗೆ ಕೊಡುತ್ತೇನೆ.'' ಲೂಕ 21:15

7. ''ದೇವರು ಕೊಡುವ ವರವೇನೆಂಬದೂ ಕುಡಿಯುವದಕ್ಕೆ ನೀರು ಕೊಡು ಎಂದು ನಿನಗೆ ಹೇಳಿದವನನ್ನು ಯಾರೆಂಬದು ನಿನಗೆ ತಿಳಿದಿದ್ದರೆ ನೀನು ಅವರನ್ನು ಬೇಡಿಕೊಳ್ಳುತ್ತಿದ್ದೀ.'' ಯೋಹಾ.4:10

8. ''ಯೇಸು ಜನರ ಗುಂಪನ್ನು ತಿರಿಗಿ ಹತ್ತಿರಕ್ಕೆ ಕರೆದು ಅವರಿಗೆ - ಎಲ್ಲರೂ ಕಿವಿಗೊಟ್ಟು ನನ್ನ ಮಾತನ್ನು ಕೇಳಿರಿ, ತಿಳುಕೊಳ್ಳಿರಿ.'' ಮಾರ್ಕ 7:14

9. ''ಹೊರಗಿನಿಂದ ಮನುಷ್ಯನೊಳಕ್ಕೆ ಹೋಗಿ ಅವನನ್ನು ಹೊಲೆ ಮಾಡ ತಕ್ಕಂಥದು ಒಂದೂ ಇಲ್ಲ. ಆದರೆ ಮನುಷ್ಯ ನೊಳಗಿಂದ ಹೊರಡುವಂಥವುಗಳೇ ಮನುಷ್ಯನನ್ನು ಹೊಲೆ ಮಾಡುವಂಥವು.'' ಮಾರ್ಕ 7:15

10. ''ಈ ನನ್ನ ಮಾತುಗಳನ್ನು ಕೇಳಿ ಅವುಗಳಂತೆ ನಡೆಯು ವವನು ಬಂಡೆಯ ಮೇಲೆ ಮನೆಯನ್ನು ಕಟ್ಟಿಕೊಂಡ ಬುದ್ಧಿ ಯುಳ್ಳ ಮನುಷ್ಯನನ್ನು ಹೋಲುವನು.'' ಮತ್ತಾ.7:24

11. ''ಕಟ್ಟಿದ ಮೇಲೆ ಮಳೆ ಸುರಿಯಿತು ಪ್ರವಾಹಗಳು ಬಂದವು. ನಾಲ್ಕು ಕಡೆಯಿಂದ ಗಾಳಿ ಬೀಸಿ ಆ ಮನೆಗೆ ಬಡಿಯಿತು. ಆದಾಗ್ಯೂ ಅದರ ಅಸ್ತಿವಾರವು ಬಂಡೆಯ ಮೇಲಿದ್ದದರಿಂದ ಅದು ಬೀಳಲಿಲ್ಲ.''ಮತ್ತಾ.7:25

12. ''ಮನುಷ್ಯ ಕುಮಾರನು ಬಂದನು, ಅವನು ಅನ್ನಪಾನಗಳನ್ನು ತೆಗೆದುಕೊಳ್ಳುವವನಾಗಿದ್ದಾನೆ; ಅವರು - ಇಗೋ, ಇವನು ಹೊಟ್ಟೆಬಾಕನು, ಕುಡುಕನು, ಭ್ರಷ್ಟರ ಮತ್ತು ಪಾಪಿಷ್ಠರ ಗೆಳೆಯನು ಅನ್ನುತ್ತಾರೆ. ಆದರೆ ಜ್ಞಾನವು ತನ್ನ ಕೆಲಸಗಳಿಂದ ಜ್ಞಾನವೇ ಎಂದು ಗೊತ್ತಾಗುವದು.'' ಮತ್ತಾ.11:19

13. ''ಆತನು ತನ್ನ ಊರಿಗೆ ಬಂದು ಅಲ್ಲಿರುವ ಸಭಾಮಂದಿರದಲ್ಲಿ ಜನರಿಗೆ ಉಪದೇಶ ಮಾಡುತ್ತಿದ್ದನು. ಅವರು ಕೇಳಿ ಅತ್ಯಾಶ್ಚರ್ಯಪಟ್ಟು - ಇವನಿಗೆ ಈ ಜ್ಞಾನವು ಈ ಮಹತ್ಕಾರ್ಯಗಳೂ ಎಲ್ಲಿಂದ ಬಂದಿದ್ದಾವು? ಅಂದುಕೊಂಡರು.'' ಮತ್ತಾ.13:54

14. ''ಇವನು ತಂದೆಗಳ ಹೃದಯವನ್ನು ಮಕ್ಕಳ ಕಡೆಗೂ ಹಟ ಹಿಡಿದವರನ್ನು ನೀತಿವಂತರ ಜ್ಞಾನದ ಕಡೆಗೂ ತಿರುಗಿಸಿ ಸಿದ್ಧವಾದ ಜನರನ್ನು ಕರ್ತನಿಗೆ ಒದಗಿಸುವನು.'' ಲೂಕ.1:17

15. ''ಯೇಸು ಜ್ಞಾನದಿಂದಲೂ ದೇಹಬಲದಲ್ಲಿಯೂ ವೃದ್ಧಿಯಾಗುತ್ತಾ ಬಂದನು. ಇದಲ್ಲದೆ ದೇವರ ಮತ್ತು ಮನುಷ್ಯರ ದಯೆಯು ಆತನ ಮೇಲೆ ಹೆಚ್ಚಾಗುತ್ತಾ

ಬಂತು.'' ಲೂಕ 2:52

16. ''ಯಾಕೆಂದರೆ ನಿಮ್ಮ ವಿರೋಧಿಗಳೆಲ್ಲರೂ ಎದುರು ನಿಲ್ಲುವದಕ್ಕೂ ಎದುರು ಮಾತಾಡುವದಕ್ಕೂ ಆಗದಂತ ಬಾಯನ್ನು ಬುದ್ಧಿಯನ್ನು ನಾನೇ ನಿಮಗೆ ಕೊಡುತ್ತೇನೆ.'' ಲೂಕ 21:15

17. ''ಕೈಸರನಿಗೆ ಕಂದಾಯ ಕೊಡುವದು ಸರಿಯೋ ಸರಿಯಲ್ಲವೋ ಎಂದು ಆತನನ್ನು ಕೇಳಿದರು. ಆತನು ಅವರ ಕುಯುಕ್ತಿಯನ್ನು ಕಂಡುಕೊಂಡು ಅವರಿಗೆ...'' ಲೂಕ 20:22,23

18. ''ನನಗೆ ಒಂದು ಹಣವನ್ನು ತೋರಿಸಿರಿ. ಇದರಲ್ಲಿ ಯಾವ ತಲೆಯೂ ಮುದ್ರೆಯು ಅದೆ ಎಂದು ಕೇಳಿದ್ದಕ್ಕೆ ಅವರು - ಕೈಸರನದು ಅಂದರು.'' ಲೂಕ 20:24

19. ''ಕೈಸರನದನ್ನು ಕೈಸರನಿಗೆ ಕೊಡಿರಿ, ದೇವರದನ್ನು ದೇವರಿಗೆ ಕೊಡಿರಿ ಅಂದನು.'' ಲೂಕ 20:25

20. ''ಅಯ್ಯೋ ಧರ್ಮೋಪದೇಶಕರೇ ಜ್ಞಾನಕ್ಕೆ ಸಾಧನವಾದ ಬೀಗದ ಕೈಯನ್ನು ತೆಗೆದುಬಿಟ್ಟಿರಿ, ನೀವೂ ಒಳಕ್ಕೆ ಹೋಗಲಿಲ್ಲ, ಒಳಕ್ಕೂ ಹೋಗುತ್ತಿರುವವರಿಗೂ ಅಡ್ಡಿ ಮಾಡಿದಿರಿ.'' ಲೂಕ 11:52

## 41. ಆಜ್ಞೆಗಳೂ ಕೈಕೊಳ್ಳುವಿಕೆಯೂ

1. ''ಜೀವದಲ್ಲಿ ಸೇರಬೇಕೆಂದಿದ್ದರೆ ದೇವರಾಜ್ಞೆಗಳಿಗೆ ಸರಿಯಾಗಿ ನಡೆದುಕೋ.'' ಮತ್ತ.19:17

2. "ಅವರು(ಶಾಸ್ತ್ರಿಗಳೂ ಫರಿಸಾಯರು) ನಿಮಗೆ ಏನೇನು ಹೇಳುತ್ತಾರೋ ಅದನ್ನೆಲ್ಲಾ ಮಾಡಿರಿ; ಕಾಪಾಡಿಕೊಳ್ಳಿರಿ, ಆದರೆ ಅವರ ನಡತೆಯ ಪ್ರಕಾರ ನಡೆಯಬೇಡಿರಿ." ಮತ್ತಾ.23:3

3. "ನಾನು ನಿಮಗೆ ಅಜ್ಞಾಪಿಸಿದ್ದನ್ನೆಲ್ಲ ಕಾಪಾಡಿಕೊಳ್ಳುವದಕ್ಕೆ ಅವರಿಗೆ ಉಪದೇಶ ಮಾಡಿರಿ." ಮತ್ತಾ.28:20

4. "ಯಾವನಾದರು ನನ್ನ ವಾಕ್ಯವನ್ನು ಕೈಕೊಂಡು ನಡೆದರೆ ಅವನು ಎಂದಿಗೂ ಸಾವನ್ನು ಕಾಣುವದಿಲ್ಲ." ಯೋಹಾ.8:51

5. "ನಾನಂತು ಅತನನ್ನು ಬಲ್ಲೆನು; ಅತನನ್ನು ಅರಿಯೆನೆಂದು ಹೇಳಿದರೆ ನಿಮ್ಮ ಹಾಗೆ ಸುಳ್ಳುಗಾರನಾಗುವೆನು." ಯೋಹಾ.8:55

6. "ಆತನನ್ನು ತಿಳಿದಿದ್ದೇನೆ; ಆತನ ವಾಕ್ಯವನ್ನು ಕೈಕೊಂಡು ನಡೆಯುತ್ತೇನೆ." ಯೋಹಾ.8:55

7. "ಯಾವನಾದರೂ ನನ್ನನ್ನು ಪ್ರೀತಿಸುವವನಾದರೆ ನನ್ನ ಮಾತನ್ನು ಕೈಕೊಂಡು ನಡೆಯುವನು."ಯೋಹಾ.14:23

8. "ನಮ್ಮ ದೇವರಾದ ಕರ್ತನು ಒಬ್ಬನೇ ದೇವರು; ನಿನ್ನ ದೇವರಾದ ಕರ್ತನನ್ನು ಪೂರ್ಣ ಹೃದಯದಿಂದಲೂ ಪೂರ್ಣ ಪ್ರಾಣದಿಂದಲೂ ಪೂರ್ಣ ಬುದ್ಧಿಯಿಂದಲೂ ಪ್ರೀತಿಸಬೇಕು." ಮಾರ್ಕ 12:29,30.

9. "ನಿನ್ನ ನೆರೆಯವನನ್ನು ನಿನ್ನಂತೆಯೇ ಪ್ರೀತಿಸಬೇಕು ಎಂಬದೇ

ಎರಡನೆಯ ಆಜ್ಞೆ. ಇವುಗಳಿಗಿಂತ ಹೆಚ್ಚಿನ ಆಜ್ಞೆ ಮತ್ತೊಂದಿಲ್ಲ." ಮಾರ್ಕ 12:31

10. "ಈ ಎರಡು ಆಜ್ಞೆಗಳು ಎಲ್ಲಾ ಧರ್ಮಶಾಸ್ತ್ರಕ್ಕೂ ಪ್ರವಾದನ ಗ್ರಂಥಕ್ಕೂ ಆಧಾರವಾಗಿವೆ ಎಂದು ಹೇಳಿದನು." ಮತ್ತಾ.22:40

11. "ನನ್ನನ್ನು ಪ್ರೀತಿಸಿದೆ ಇರುವವನು ನನ್ನ ಮಾತುಗಳನ್ನು ಕೈಕೊಂಡು ನಡೆಯುವದಿಲ್ಲ." ಯೋಹಾ.14:24

12. "ವ್ಯಭಿಚಾರ ಮಾಡಬಾರದು; ನರಹತ್ಯ ಮಾಡಬಾರದು; ಕದಿಯಬಾರದು; ಸುಳ್ಳು ಸಾಕ್ಷಿ ಹೇಳಬಾರದು. ನಿನ್ನ ತಂದೆ ತಾಯಿಗಳನ್ನು ಸನ್ಮಾನಿಸಬೇಕು ಎಂಬ ದೇವರಾಜ್ಞೆಗಳು ನಿನಗೆ ಗೊತ್ತಿವೆಯಷ್ಟೆ."ಲೂಕ 18:20

13. "ನಾನು ನನ್ನ ತಂದೆಯ ಆಜ್ಞೆಗಳನ್ನು ಕೈಕೊಂಡು ನಡೆದು ಆತನ ಪ್ರೀತಿಯಲ್ಲಿ ನೆಲೆಗೊಂಡಿರುವ ಮೇರೆಗೆ ನೀವು ನನ್ನ ಆಜ್ಞೆಗಳನ್ನು ಕೈಕೊಂಡು ನಡೆದರೆ ನನ್ನ ಪ್ರೀತಿಯಲ್ಲಿ ನೆಲೆಗೊಂಡಿರುವಿರಿ." ಯೋಹಾ.15:10

14. "ಲೋಕದಲ್ಲಿ ನೀನು ನನಗೆ ಕೊಟ್ಟ ಮನುಷ್ಯರಿಗೆ ನಿನ್ನ ಹೆಸರನ್ನು ತಿಳಿಯಪಡಿಸಿದೆನು. ಇವರು ನಿನ್ನವರಾಗಿದ್ದರು. ನೀನು ಇವರನ್ನು ನನಗೆ ಕೊಟ್ಟೀ; ಮತ್ತು ಇವರು ನಿನ್ನ ವಾಕ್ಯವನ್ನು ಕೈಕೊಂಡು ನಡೆದಿದ್ದಾರೆ." ಯೋಹಾ.17:6

15. "ಇವರನ್ನು ಸತ್ಯದಲ್ಲಿ ಸೇರಿಸಿ ಪ್ರತಿಷ್ಠೆ ಪಡಿಸು. ನಿನ್ನ ವಾಕ್ಯವೇ ಸತ್ಯವು." ಯೋಹಾ.17:17

16. "ಇವರಿಗೋಸ್ಕರ ಮಾತ್ರವಲ್ಲದೆ ಇವರ ವಾಕ್ಯದಿಂದ

ನನ್ನನ್ನು ನಂಬುವವರಿಗೋಸ್ಕರ ಸಹ ಕೇಳಿಕೊಳ್ಳುತ್ತೇನೆ.'' ಯೋಹಾ.17:20

17. ''ನಾನು ನಿಮ್ಮನ್ನು ಪ್ರೀತಿಸಿದ ಮೇರೆಗೆ ನೀವೂ ಒಬ್ಬರಿಗೊಬ್ಬರು ಪ್ರೀತಿಸಬೇಕೆಂಬದೇ ನಾನು ಕೊಡುವ ಆಜ್ಞೆಯಾಗಿದೆ.'' ಯೋಹಾ.15:12

18. ''ನನ್ನ ಬಳಿಗೆ ಬಂದು ನನ್ನ ಮಾತುಗಳನ್ನು ಕೇಳಿ ಅವುಗಳಂತೆ ನಡೆಯುವವನು ಯಾರಿಗೆ ಸಮಾನನೆಂಬದನ್ನು ನಿಮಗೆ ತೋರಿಸುತ್ತೇನೆ.'' ಲೂಕ 6:47.

19. ''ಆಳವಾಗಿ ಅಗಿದು ಬಂಡೆಯ ಮೇಲೆ ಅಸ್ತಿವಾರವನ್ನು ಹಾಕಿ ಮನೆ ಕಟ್ಟಿದವನಿಗೆ ಸಮಾನನು, ಹೊಳೆ ಬಂದು ಪ್ರವಾಹವು ಆ ಮನೆಗೆ ಬಡಿದಾಗ್ಯೂ ಅದು ಚೆನ್ನಾಗಿ ಕಟ್ಟಿದ್ದರಿಂದ ಆ ಪ್ರವಾಹವು ಅದನ್ನು ಅಲ್ಲಾಡಿಸಲಾರದೆ ಹೋಯಿತು.'' ಲೂಕ 6:48

20. ''ಆದದರಿಂದ ಈ ಸಣ್ಣ ಸಣ್ಣ ಆಜ್ಞೆಗಳಲ್ಲಿಯಾದರೂ ಒಂದನ್ನು ಮೀರಿ ಜನರಿಗೂ ಹಾಗೆ ಮೀರುವದಕ್ಕೆ ಬೋಧಿಸುವವನು ಪರಲೋಕ ರಾಜ್ಯದಲ್ಲಿ ಬಹಳ ಚಿಕ್ಕವನೆನಿಸಿಕೊಳ್ಳುವನು.'' ಮತ್ತಾ.5:19

## 42. ಒಳ್ಳೇ ಕ್ರಿಯೆಗಳು.

1. ''ನಿಮ್ಮ ಒಳ್ಳೇ ಕ್ರಿಯೆಗಳನ್ನು ನೋಡಿ ಪರಲೋಕದಲ್ಲಿರುವ ನಿಮ್ಮ ತಂದೆಯನ್ನು ಕೊಂಡಾಡುವರು.'' ಮತ್ತಾ.5:16

2. ''ನಾನು ನಿಮಗೆ ಹೇಳುವದೇನಂದರೆ - ಕೆಡುಕನನ್ನು

ಎದುರಿಸಬೇಡ. ಒಬ್ಬನು ನಿನ್ನ ಬಲಗೆನ್ನೆಯ ಮೇಲೆ ಹೊಡೆದರೆ ಅವನಿಗೆ ಮತ್ತೊಂದು ಕೆನ್ನೆಯನ್ನು ಒಡ್ಡು.'' ಮತ್ತಾ.5:39

3. ''ಪರಲೋಕದಲ್ಲಿರುವ ನಿಮ್ಮ ತಂದೆಯು ಯಾವ ದೋಷವೂ ಇಲ್ಲದವನಾಗಿರುವಂತೆ ನೀವೂ ದೋಷವಿಲ್ಲದವರಾಗಿರ್ರಿ.'' ಮತ್ತಾ.5:48

4. ''ಈ ಸ್ತ್ರೀಗೆ ಯಾಕೆ ತೊಂದರೆ ಕೊಡುತ್ತೀರಿ? ಈಕೆ ನನಗೆ ಒಳ್ಳೇ ಕಾರ್ಯವನ್ನು ಮಾಡಿದ್ದಾಳೆ.'' ಮತ್ತಾ.26:10

5. ''ತಂದೆಯ ಕಡೆಯಿಂದ ಅನೇಕ ಒಳ್ಳೇ ಕ್ರಿಯೆಗಳನ್ನು ನಿಮಗೆ ತೋರಿಸಿದೆನು.'' ಯೋಹಾ.10:32

6. ''ನಾನು ಹಸಿದಿದ್ದೆನು, ನನಗೆ ಊಟಕ್ಕೆ ಕೊಟ್ಟಿರಿ, ನಾನು ಬಾಯಾರಿದ್ದೆನು, ನನಗೆ ಕುಡಿಯುವದಕ್ಕೆ ಕೊಟ್ಟಿರಿ. ಪರದೇಶಿಯಾಗಿದ್ದೆನು, ನನ್ನನ್ನು ಸೇರಿಸಿಕೊಂಡಿರಿ, ಬಟ್ಟೆಯಿಲ್ಲದವನಾಗಿದ್ದೆನು. ನನಗೆ ಉಡುವದಕ್ಕೆ ಕೊಟ್ಟಿರಿ.'' ಮತ್ತಾ.25:35

7. ''ರೋಗದಲ್ಲಿ ಬಿದ್ದಿದ್ದೆನು, ನನ್ನನ್ನು ಆರೈಕೆ ಮಾಡುವದಕ್ಕೆ ಬಂದಿರಿ; ಸೆರೆಮನೆಯಲ್ಲಿದ್ದೆನು ನನ್ನನ್ನು ನೋಡುವದಕ್ಕೆ ಬಂದಿರಿ'' ಮತ್ತಾ.5:36

8. ''ಈ ನನ್ನ ಸಹೋದರರಲ್ಲಿ ಕೇವಲ ಅಲ್ಪನಾದವನೊಬ್ಬನಿಗೆ ಏನೇನು ಮಾಡಿದಿರೋ ಅದನ್ನು ನನಗೂ ಮಾಡಿದ ಹಾಗಾಯಿತು.'' ಮತ್ತಾ.25:40

9. ‘‘ನೀನಾದರೋ ಧರ್ಮಕೊಡುವಾಗ ನೀನು ಧರ್ಮ ಕೊಟ್ಟಿದ್ದು ಅಂತರಂಗವಾಗುವ ಹಾಗೆ ನಿನ್ನ ಬಲಗೈ ಮಾಡಿದ್ದು ಎಡಗೈಗೂ ತಿಳಿಯದಿರಲಿ.’’ ಮತ್ತಾ.6:3

10. ‘‘ಅಂತರಂಗದಲ್ಲಿ ನಡೆಯುವದನ್ನು ನೋಡುವ ನಿನ್ನ ತಂದೆಯು ನಿನಗೆ ಫಲಕೊಡುವನು.’’ ಮತ್ತಾ.6:4

11. ‘‘ನಿನಗೆ ಒಂದು ಕಡಿಮೆಯಾಗಿದೆ, ಹೋಗು ನಿನ್ನ ಬದುಕನ್ನೆಲ್ಲಾ ಮಾರಿ ಬಡವರಿಗೆ ಕೊಡು, ಪರಲೋಕದಲ್ಲಿ ನಿನಗೆ ಸಂಪತ್ತಿರುವದು.’’ ಮಾರ್ಕ 10:21

12. ‘‘ನಿನ್ನನ್ನು ಬೇಡುವವನಿಗೆ ಕೊಡು; ನಿನ್ನಲ್ಲಿ ಕಡಾಈಸಿಕೊಳ್ಳ ಬೇಕೆಂದು ಬಂದವನಿಗೆ ಮುಖ ತಿರುವಿಕೊಳ್ಳಬೇಡ.’’ ಮತ್ತಾ.5:42

13. ‘‘ಕೊಡಿರಿ, ಅಗ ನಿಮಗೂ ಕೊಡುವರು; ಜಡಿದು ಅಲ್ಲಾಡಿಸಿ ಹೊರ ಚೆಲ್ಲುವ ಹಾಗೆ ತುಂಬ ಅಳತೆಯನ್ನು ಅಳೆದು ನಿಮ್ಮ ಸೆರಗಿಗೆ ಹಾಕುವರು.’’ ಲೂಕ 6:38

14. ‘‘ಒಳಗಿರುವಂಥದ್ದನ್ನು ದಾನ ಕೊಡಿರಿ; ಆಗ ಸಕಲವೂ ನಿಮಗೆ ಶುದ್ಧವಾಗಿರುವದು.’’ ಲೂಕ 11:41

15. ‘‘ನಿಮಗಿರುವದನ್ನು ಮಾರಿಬಿಟ್ಟು, ದಾನ ಕೊಡಿರಿ; ಹಳೇವಾಗದಂಥಾ ಹಮ್ಮಿಣಿಗಳನ್ನು ಮಾಡಿಕೊಂಡು ಪರಲೋಕದಲ್ಲಿ ಲಯವಾಗದ ದ್ರವ್ಯವನ್ನು ಇಟ್ಟುಕೊಳ್ಳಿರಿ.’’ ಲೂಕ 12:33

16. ‘‘ನೀನು ಔತಣ ಮಾಡಿಸುವಾಗ ಬಡವರು ಊನವಾದವರು ಕುಂಟರು ಕುರುಡರು ಇಂಥವರನ್ನು ಕರೆ;’’ ಲೂಕ 14:13

17. “ಅವರು ನಿನಗೆ ಮುಯ್ಯಿಗೆ ಮುಯ್ಯಿ ಮಾಡುವದಕ್ಕೆ ಏನೂ ಇಲ್ಲದವರಾಗಿದ್ದರೂ ನೀತಿವಂತರು ಜೀವಿತರಾಗಿ ಎದ್ದು ಬರುವಲ್ಲಿ ನೀನು ಧನ್ಯನಾಗುವಿ.” ಲೂಕ 14:14

18. “ನೀವು ನಿಮ್ಮ ಮಕ್ಕಳಿಗೆ ಒಳ್ಳೆಯ ಪದಾರ್ಥಗಳನ್ನು ಕೊಡಬಲ್ಲವರಾದರೆ ಪರಲೋಕದಲ್ಲಿರುವ ನಿಮ್ಮ ತಂದೆಯು ತನ್ನನ್ನು ಬೇಡಿಕೊಳ್ಳುವವರಿಗೆ ಎಷ್ಟೋ ಹೆಚ್ಚಾಗಿ ಒಳ್ಳೆಯ ವರಗಳನ್ನು ಕೊಡುವನಲ್ಲವೇ.” ಮತ್ತಾ.7:11

19. “ಜನರು ನಿಮಗೆ ಏನೇನು ಮಾಡಬೇಕೆಂದು ಬಯಸುತ್ತೀರೋ ಅದನ್ನೇ ನೀವೂ ಅವರಿಗೆ ಮಾಡಿರಿ.” ಮತ್ತಾ.7:12

20. “ನನ್ನ ಬದುಕನ್ನು ನಾನು ಬೇಕಾದ ಹಾಗೆ ಮಾಡಬಹುದಲ್ಲವೇ? ನಾನು ಒಳ್ಳೆಯವನಾಗಿರುವದು ನಿನ್ನ ಕಣ್ಣಿಗೆ ಒತ್ತುತ್ತದೋ” ಮತ್ತಾ.20:16

## 43. ಸಿದ್ಧವಿಲ್ಲದಿರುವಿಕೆ.

1. “ಪರಲೋಕ ರಾಜ್ಯವು ಆರತಿಗಳನ್ನು ತೆಗೆದುಕೊಂಡು ಮದಲಿಂಗನನ್ನು ಎದುರುಗೊಳ್ಳುವದಕ್ಕೆ ಹೊರಟಂಥ ಹತ್ತು ಮಂದಿ ಕನ್ಯೆಯರಿಗೆ ಹೋಲಿಕೆಯಾಗಿದೆ.” ಮತ್ತಾ.25:1

2. “ಅವರಲ್ಲಿ ಐದು ಮಂದಿ ಬುದ್ಧಿಯಿಲ್ಲದವರು ಐದು ಮಂದಿ ಬುದ್ಧಿವಂತೆಯರು.” ಮತ್ತಾ.25:2

3. “ಬುದ್ಧಿಯಿಲ್ಲದವರು ತಮ್ಮ ಆರತಿಗಳನ್ನು ತಕ್ಕೊಂಡರು, ಆದರೆ ಎಣ್ಣೆಯನ್ನು ತಕ್ಕೊಳ್ಳಲಿಲ್ಲ.”ಮತ್ತಾ.25:3

4. ''ಬುದ್ಧಿವಂತೆಯರು ತಮ್ಮ ಆರತಿಗಳ ಕೂಡ ಪಾತ್ರೆಗಳಲ್ಲಿ ಎಣ್ಣೆಯನ್ನೂ ತಕ್ಕೊಂಡರು. ''ಮತ್ತಾ.25:4

5. ''ಮದಲಿಂಗನು ಬರುವದಕ್ಕೆ ತಡ ಮಾಡಲು ಅವರೆಲ್ಲರೂ ತೂಕಡಿಸಿ ಮಲಗಿದರು.'' ಮತ್ತಾ.25:5

6. ''ಅರ್ಧ ರಾತ್ರಿಯಲ್ಲಿ - ಇಗೋ, ಮದಲಿಂಗನು! ಅವನನ್ನು ಎದುರುಗೊಳ್ಳುವದಕ್ಕೆ ಹೊರಡಿರಿ ಎಂಬ ಕೂಗಾಯಿತು.'' ಮತ್ತಾ.25:6

7. ''ಆಗ ಆ ಕನ್ಯೆರೆಲ್ಲರು ಎಚ್ಚತ್ತು ತಮ್ಮ ಆರತಿಗಳನ್ನು ನೆಟ್ಟಗೆ ಮಾಡಿದರು.'' ಮತ್ತಾ.25:7

8. ''ಆಗ್ಗ ಬುದ್ಧಿಯಿಲ್ಲದವರು ಬುದ್ಧಿವಂತೆಯರಿಗೆ - ನಿಮ್ಮ ಎಣ್ಣೆಯಲ್ಲಿ ನಮಗೆ ಸ್ವಲ್ಪ ಕೊಡಿರಿ; ನಮ್ಮ ಆರತಿಗಳು ಆರಿ ಹೋಗುತ್ತವೆ ಎಂದು ಹೇಳಿದರು.'' ಮತ್ತಾ.25:8

9. ''ಆ ಬುದ್ಧಿವಂತೆಯರು - ನಿಮಗೆ ಕೊಟ್ಟರೆ ನಮಗೂ ನಿಮಗೂ ಕೂಡ ಸಾಲದೆ ಹೋದೀತು; ನೀವು ಮಾರುವವರ ಬಳಿಗೆ ಹೋಗಿ ಕೊಂಡುಕೊಂಡರೆ ಒಳ್ಳೇದು ಅಂದರು.'' ಮತ್ತಾ.25:9

10. ''ಅವರು ಕೊಂಡುಕೊಳ್ಳುವದಕ್ಕೆ ಹೋದಾಗ, ಮದಲಿಂಗನು ಬಂದನು. ಸಿದ್ಧವಾಗಿದ್ದವರು ಅವನ ಸಂಗಡ ಮದುವೆಯ ಮನೆಯೊಳಕ್ಕೆ ಹೋದರು.'' ಮತ್ತಾ.25:10

11. ''ತರುವಾಯ ಉಳಿದ ಕನ್ಯೆಯರು ಬಂದು - ಸ್ವಾಮಿಾ, ಸ್ವಾಮಿಾ, ನಮಗೆ ತೆರೆಯಿರಿ ಅಂದರು.'' ಮತ್ತಾ.25:11

12. "ಆತನು - ನಿಮ್ಮನ್ನು ನಾನರಿಯೆನೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಆದ ಕಾರಣ ಆ ದಿನವಾದರೂ ಗಳಿಗೆ ಯಾದರೂ ನಿಮಗೆ ಗೊತ್ತಿಲ್ಲವಾದದರಿಂದ ಎಚ್ಚರವಾಗಿರ್ರಿ." ಮತ್ತಾ.25:12,13

13. "ಪರಲೋಕ ರಾಜ್ಯವು ಮಗನಿಗೆ ಮದುವೆ ಮಾಡಿದ ಒಬ್ಬ ಅರಸನಿಗೆ ಹೋಲಿಕೆಯಾಗಿದೆ." ಮತ್ತಾ.22:2

14. "ಮದುವೆಗೆ ಹೇಳಿಸಿಕೊಂಡವರನ್ನು ಕರೆಯುವದಕ್ಕೆ ತನ್ನ ಆಳುಗಳನ್ನು ಕಳುಹಿಸಲು ಬರುವದಕ್ಕೆ ಅವರಿಗೆ ಮನಸ್ಸಿರಲಿಲ್ಲ." ಮತ್ತಾ.22:3

15. "ಆಗ ತನ್ನ ಆಳುಗಳಿಗೆ - ಮದುವೆಗೆ ಸಿದ್ಧವಾಗಿದೆ ಸರಿ; ಆದರೆ ಕರೆಯಲ್ಪಟ್ಟವರು ಯೋಗ್ಯರಾಗಿರಲಿಲ್ಲ." ಮತ್ತಾ.22:8

16. "ನೀವು ಈಗ ನಾಲ್ಕು ಹಾದಿಗಳು ಕೂಡುವ ಸ್ಥಳಗಳಿಗೆ ಹೋಗಿ ಕೆಟ್ಟವರು ಒಳ್ಳೆಯವರು ಅನ್ನದೆ ಕಂಡ ಕಂಡವರನ್ನೆಲ್ಲಾ ಕೂಡಿಸಿ ಕರಕೊಂಡು ಬನ್ನಿರಿ." ಮತ್ತಾ.22:9

17. "ಆ ಮೇಲೆ ಅರಸನು ಕೂತವರನ್ನು ನೋಡುವದಕ್ಕೆ ಒಳಕ್ಕೆ ಬರಲಾಗಿ ಮದುವೆಯ ಬಟ್ಟೆಯನ್ನು ಹಾಕಿಕೊಳ್ಳದ ಒಬ್ಬನನ್ನು ಕಂಡು..." ಮತ್ತಾ.22:11

18. "ಏನಪ್ಪಾ, ಮದುವೆಯ ಬಟ್ಟೆ ಇಲ್ಲದೆ ನೀನಿಲ್ಲಿ ಹೇಗೆ ಒಳಕ್ಕೆ ಬಂದಿ ಎಂದು ಕೇಳಲು ಅವನು ಸುಮ್ಮನಿದ್ದನು."

ಮತ್ತಾ.22:12

19. "ಆ ಮೇಲೆ ಅರಸನು ಸೇವಕರಿಗೆ - ಅವನ ಕೈಕಾಲುಗಳನ್ನು ಕಟ್ಟಿ ಅವನನ್ನು ಹೊರಕ್ಕೆ ಕತ್ತಲೆಗೆ ನೂಕಿರಿ ಎಂದು ಹೇಳಿದನು. ಅಲ್ಲಿ ಗೋಳಾಟವೂ ಕಟಕಟ ಹಲ್ಲು ಕಡಿಯೋಣವೂ ಇರುವವು." ಮತ್ತಾ.22:13

20. "ಹೀಗೆ ಕರೆಯಲ್ಪಟ್ಟವರು ಬಹು ಜನ, ಆಯಲ್ಪಟ್ಟವರು ಸ್ವಲ್ಪ ಜನ ಅಂದನು." ಮತ್ತಾ.22:14

## 44. ವಾರ್ತೆಯೂ ವಾಕ್ಯವೂ.

1. "ನಾನು ನಿಮಗೆ ಹೇಳುವ ಮಾತುಗಳನ್ನು ನನ್ನಷ್ಟಕ್ಕೆ ನಾನೇ ಆಡುವದಿಲ್ಲ; ತಂದೆಯು ನನ್ನಲ್ಲಿ ಇದ್ದುಕೊಂಡು ತನ್ನ ಕ್ರಿಯೆಗಳನ್ನು ನಡಿಸುತ್ತಾನೆ." ಯೋಹಾ.14:10

2. "ವಾಕ್ಯವು ದೇವರ ಬಳಿಯಲ್ಲಿತ್ತು; ಆ ವಾಕ್ಯವು ದೇವರಾಗಿತ್ತು." ಯೋಹಾ.1:1

3. "ನಿನ್ನ ವಾಕ್ಯವೇ ಸತ್ಯವು." ಯೋಹಾ.17:17

4. "ದೇವರಿಂದ ಹುಟ್ಟಿದವನು ದೇವರ ಮಾತುಗಳನ್ನು ಕೇಳುತ್ತಾನೆ." ಯೋಹಾ.8:47

5 "ನಾನು ನಿಮಗೆ ಹೇಳಿರುವ ಮಾತುಗಳೇ ಆತ್ಮವಾಗಿಯೂ ಜೀವವಾಗಿಯೂ ಅವೆ."ಯೋಹಾ.6:63

6. "ಯಾರು ದೇವರ ವಾಕ್ಯವನ್ನು ಕೇಳಿ ಅದರಂತೆ ನಡೆಯುತ್ತಾರೋ ಅವರೇ ನನಗೆ ತಾಯಿಯೂ ಅಣ್ಣ

ತಮ್ಮಂದಿರೂ ಆಗಬೇಕು." ಲೂಕ 8:21

7. "ಬಿತ್ತುವವನು ವಾಕ್ಯವೆಂಬ ಬೀಜವನ್ನು ಬಿತ್ತುತ್ತಾನೆ; ಕೆಲವರು ವಾಕ್ಯವನ್ನು ಕೇಳಿದ ಕೂಡಲೇ ಸೈತಾನನು ಬಂದು ಅವರಲ್ಲಿ ಬಿತ್ತಿದ್ದ ವಾಕ್ಯವನ್ನು ತೆಗೆದು ಬಿಡುತ್ತಾನೆ." ಮಾರ್ಕ 4:14,15

8. "ಬೇರೆ ಕೆಲವರು ವಾಕ್ಯವನ್ನು ಕೇಳಿದ ಕೂಡಲೇ ಸಂತೋಷದಿಂದ ಅದನ್ನು ಸ್ವೀಕರಿಸುತ್ತಾರೆ.ತಮಗೆ ಬೇರಿಲ್ಲದ ಕಾರಣ ಇವರು ಸ್ವಲ್ಪ ಕಾಲ ಮಾತ್ರವೇ ಇದ್ದು ಬಳಿಕ ಆ ವಾಕ್ಯದ ನಿಮಿತ್ತವಾಗಿ ಸಂಕಟವಾಗಲಿ ಹಿಂಸೆಯಾಗಲಿ ಬಂದರೆ ಬೇಗ ಎಡವಿ ಬೀಳುತ್ತಾರೆ." ಮಾರ್ಕ 4:17

9. "ಇನ್ನು ಕೆಲವರು ವಾಕ್ಯವನ್ನು ಕೇಳಿದ್ದಾಗ್ಯೂ ಪ್ರಪಂಚದ ಚಿಂತೆಗಳಿಗೂ ಐಶ್ವರ್ಯದಿಂದುಂಟಾಗುವ ಮೋಸವು ... ಒಳಗೆ ಸೇರಿ ವಾಕ್ಯವನ್ನು ಅಡಗಿಸಿ ಬಿಡುವದರಿಂದ ಫಲವನ್ನು ಕೊಡದೆ ಇರುತ್ತಾರೆ. ಇವರೇ ಮುಳ್ಳು ಗಿಡಗಳಲ್ಲಿ ಬೀಜ ಬಿದ್ದ ನೆಲವಾಗಿರುವರು." ಮಾರ್ಕ 4:19

10. "ಕೆಲವರು ವಾಕ್ಯವನ್ನು ಕೇಳಿ ಕೈಕೊಂಡು ಮೂವತ್ತರಷ್ಟಾಗಲಿ ಅರವತ್ತರಷ್ಟಾಗಲಿ ನೂರರಷ್ಟಾಗಲಿ ಫಲವನ್ನು ಕೊಡುತ್ತಾರೆ. ಅವರೇ ಬೀಜ ಬಿದ್ದ ಒಳ್ಳೆಯ ನೆಲವಾಗಿರುವರು." ಮಾರ್ಕ 4:20

11. "ಯಾರಾದರು ನಿಮ್ಮನ್ನು ಸೇರಿಸಿಕೊಳ್ಳದೆಯೂ ನಿಮ್ಮ ವಾಕ್ಯಗಳನ್ನು ಕೇಳದೆಯೂ ಹೋದರೆ ನೀವು ಅ

ಮನೆಯನ್ನಾಗಲಿ ಆ ಊರನ್ನಾಗಲಿ ಬಿಟ್ಟು ಹೊರಡುವಾಗ ನಿಮ್ಮ ಕಾಲಿಗೆ ಹತ್ತಿರ ಧೂಳನ್ನು ಝಾಡಿಸಿ ಬಿಡಿರಿ.'' ಮತ್ತಾ.10:14

12. ''ನಾನು ನಿಮಗೆ ಹೇಳುವದೇನಂದರೆ ಮನುಷ್ಯರು ಸುಮ್ಮನೆ ಆಡುವ ಪ್ರತಿಯೊಂದು ಮಾತಿನ ವಿಷಯವಾಗಿ ನ್ಯಾಯವಿಚಾರಣೆಯ ದಿನದಲ್ಲಿ ಉತ್ತರ ಕೊಡಬೇಕು.'' ಮತ್ತಾ.12:36

13. ''ನಿನ್ನ ಮಾತುಗಳಿಂದಲೇ ನೀತಿವಂತನೆಂದು ತೀರ್ಪು ಹೊಂದುವಿ; ನಿನ್ನ ಮಾತುಗಳಿಂದಲೇ ಅಪರಾಧಿಯೆಂದು ತೀರ್ಪು ಹೊಂದುವಿ.'' ಮತ್ತಾ.12:37

14. ''ಭೂಮ್ಯಾಕಾಶಗಳು ಅಳಿದು ಹೋಗುವವು; ಆದರೆ ನನ್ನ ಮಾತುಗಳು ಅಳಿದು ಹೋಗುವದೇ ಇಲ್ಲ.'' ಮತ್ತಾ.24:35

15. ''ಹಾಗನ್ನಬೇಡ ದೇವರ ವಾಕ್ಯವನ್ನು ಕೇಳಿ ಅದಕ್ಕೆ ಸರಿಯಾಗಿ ನಡೆದುಕೊಳ್ಳುವವರೇ ಧನ್ಯರು.'' ಲೂಕ 11:28

16. ''ಯಾವನಾದರು ನನ್ನ ಮಾತುಗಳನ್ನು ಕೇಳಿದರೂ ಕೈಕೊಂಡು ನಡೆಯದೆ ಹೋದರೆ ನಾನೇ ಅವನಿಗೆ ತೀರ್ಪು ಮಾಡುವದಿಲ್ಲ.'' ಯೋಹಾ.12:47

17. ''ನನ್ನನ್ನು ಲಕ್ಷ್ಯ ಮಾಡದೆ ನನ್ನ ಮಾತುಗಳನ್ನು ಅಂಗೀಕರಿಸದೆ ಇರುವವನಿಗೆ ತೀರ್ಪು ಮಾಡುವಂಥದ್ದು ಒಂದು ಇದೆ. ಅದು ಯಾವದೆಂದರೆ ನಾನು ಆಡಿದ ಮಾತು;'' ಯೋಹಾ.12:48

18. "ನೀವು ನನ್ನಲ್ಲಿಯೂ ನನ್ನ ವಾಕ್ಯಗಳು ನಿಮ್ಮಲ್ಲಿಯೂ ನೆಲೆಗೊಂಡಿದ್ದರೆ ಏನು ಬೇಕಾದರೂ ಬೇಡಿಕೊಳ್ಳಿರಿ, ಅದು ನಿಮಗೆ ದೊರಕುವದು." ಯೋಹಾ.15:7

19. "ಆದರೆ ಇವರಿಗೋಸ್ಕರ ಮಾತ್ರವಲ್ಲದೆ ಇವರ ವಾಕ್ಯದಿಂದ ನನ್ನನ್ನು ನಂಬುವವರಿಗೋಸ್ಕರ ಸಹ ಕೇಳಿಕೊಳ್ಳುತ್ತೇನೆ." ಯೋಹಾ.17:20

20. "ನಿಮಗೆ ಸತ್ಯವಾಗಿ ಹೇಳುತ್ತೇನೆ ಆಕಾಶವೂ ಭೂಮಿಯು ಅಳಿದು ಹೋಗುವ ತನಕ ಧರ್ಮಶಾಸ್ತ್ರವೆಲ್ಲಾ ನೆರವೇರಿದ ಹೊರತು ಅದರೊಳಗಿಂದ ಒಂದು ಸೊನ್ನೆಯಾದರೂ ಗುಡುಸಾದರೂ ಅಳಿದು ಹೋಗಲಾರದು."ಮತ್ತಾ.5:18

## 45. ಜೀವದ ರೊಟ್ಟಿ

1. "ಮನುಷ್ಯನು ರೊಟ್ಟಿ ತಿಂದ ಮಾತ್ರದಿಂದ ಬದುಕುವದಿಲ್ಲ. ದೇವರ ಬಾಯಿಂದ ಬರುವ ಪ್ರತಿಯೊಂದು ಮಾತಿನಿಂದ ಬದುಕುವನು." ಮತ್ತಾ.4:4

2. "ನಿಮಗೆ ನಿಜ ನಿಜವಾಗಿ ಹೆಳುತ್ತೇನೆ; ಮೋಶೆಯು ನಿಮಗೆ ಪರಲೋಕದಿಂದ ರೊಟ್ಟಿ ಕೊಟ್ಟವನಲ್ಲ; ನನ್ನ ತಂದೆಯು ಪರಲೋಕದಿಂದ ಬರುವ ನಿಜವಾದ ರೊಟ್ಟಿಯನ್ನು ಕೊಡುತ್ತಾನೆ." ಯೋಹಾ.6:32

3. "ದೇವರು ಕೊಡುವ ಆ ರೊಟ್ಟಿ, ಯಾವದೆಂದರೆ ಪರಲೋಕದಿಂದ ಇಳಿದು ಬಂದು ಲೋಕಕ್ಕೆ ಜೀವವನ್ನು ಉಂಟು ಮಾಡುವಂಥದ್ದೇ."ಯೋಹಾ.6:33

4. ‘‘ಜೀವ ಕೊಡುವ ರೊಟ್ಟಿ ನಾನೇ; ನಿಮ್ಮ ಹಿರಿಯರು ಅಡವಿಯಲ್ಲಿ ಮನ್ನಾ ತಿಂದರೂ ಸತ್ತು ಹೋದರು.’’ ಯೋಹಾ.6:48,49

5. ‘‘ಪರಲೋಕದಿಂದ ಇಳಿದು ಬರುವ ರೊಟ್ಟಿ ಎಂಥದ್ದೆಂದರೆ ಅದನ್ನು ತಿಂದವನು ಸಾಯುವದಿಲ್ಲ.’’ಯೋಹಾ.6:50

6. ‘‘ಪರಲೋಕದಿಂದ ಇಳಿದು ಬಂದ ಜೀವವುಳ್ಳ ರೊಟ್ಟಿಯು ನಾನೇ; ಈ ರೊಟ್ಟಿಯನ್ನು ಯಾವನಾದರೂ ತಿಂದರೆ ಅವನು ಸದಾಕಾಲ ಬದುಕುವನು.’’ ಯೋಹಾ.6:51

7. ‘‘ಪರಲೋಕದಿಂದ ಇಳಿದು ಬಂದ ರೊಟ್ಟಿ ಇದೇ. ನಿಮ್ಮ ಹಿರಿಯರು ಮನ್ನಾ ತಿಂದರೂ ಸತ್ತರು. ಇದು ಹಾಗಲ್ಲ, ಈ ರೊಟ್ಟಿಯನ್ನು ತಿನ್ನುವವನು ಸದಾಕಾಲ ಜೀವಿಸುವನು.’’ ಯೋಹಾ.6:58

8. ‘‘ಯೇಸು ರೊಟ್ಟಿಯನ್ನು ತೆಗೆದುಕೊಂಡು ದೇವರ ಸ್ತೋತ್ರ ಮಾಡಿ ಮುರಿದು ಶಿಷ್ಯರಿಗೆ ಕೊಟ್ಟು - ತಕ್ಕೊಳ್ಳಿರಿ, ತಿನ್ನಿರಿ, ಇದು ನನ್ನ ದೇಹ ಅಂದನು.’’ ಮತ್ತಾ.26:26

9. ‘‘ಇದು ನನ್ನ ರಕ್ತ. ಇದು ಒಡಂಬಡಿಕೆಯ ರಕ್ತ. ಇದು ಪಾಪಗಳ ಕ್ಷಮೆಗಾಗಿ ಬಹು ಜನರಿಗಾಗಿ ಸುರಿಸಲ್ಪಡುವ ರಕ್ತ.’’ ಮತ್ತಾ.26:28

10. ‘‘ನಿಮಗೆ ನಿಜ ನಿಜವಾಗಿ ಹೇಳುತ್ತೇನೆ, ನೀವು ಮನುಷ್ಯ ಕುಮಾರನ ಮಾಂಸವನ್ನು ತಿನ್ನದೆ ಅವನ ರಕ್ತವನ್ನು ಕುಡಿಯದೆ ಹೋದರೆ ನಿಮ್ಮೊಳಗೆ ಜೀವವಿಲ್ಲ.’’ ಯೋಹಾ.6:53

11. "ನನ್ನ ಮಾಂಸವನ್ನು ತಿಂದು, ನನ್ನ ರಕ್ತವನ್ನು
ಕುಡಿಯುವವನು ನಿತ್ಯ ಜೀವವನ್ನು ಹೊಂದಿದ್ದಾನೆ; ಮತ್ತು
ನಾನು ಅವನನ್ನು ಕಡೇ ದಿನದಲ್ಲಿ ಎಬ್ಬಿಸುವೆನು."
ಯೋಹಾ.6:54

12. "ಯಾಕೆಂದರೆ ನನ್ನ ಮಾಂಸವೆ ನಿಜವಾದ ಆಹಾರ."
ಯೋಹಾ.6:55

13. "ನನ್ನ ಮಾಂಸವನ್ನು ತಿಂದು ನನ್ನ ರಕ್ತವನ್ನು
ಕುಡಿಯುವವನು ನನ್ನಲ್ಲಿ ಇರುತ್ತಾನೆ; ನಾನು ಅವನಲ್ಲಿ
ಇರುತ್ತೇನೆ." ಯೋಹಾ.6:56

14. "ಜೀವಸ್ವರೂಪನಾದ ತಂದೆಯು ನನ್ನನ್ನು
ಕಳುಹಿಸಿಕೊಟ್ಟಿರಲಾಗಿ ನಾನು ತಂದೆಯಿಂದ ಜೀವಿಸುತ್ತೇನೆ,
ಅದರಂತೆ ನನ್ನನ್ನು ತಿನ್ನುವವನೇ ನನ್ನಿಂದ ಜೀವಿಸುವನು."
ಯೋಹಾ.6:57

15. "ಜೀವ ಕೊಡುವ ರೊಟ್ಟಿ ನಾನೇ; ನನ್ನ ಬಳಿಗೆ ಬರುವವನಿಗೆ
ಎಂದಿಗೂ ಹಸಿವೆಯಾಗುವದಿಲ್ಲ." ಯೋಹಾ.6:35

16. "ದೇವರು ಕೊಡುವ ವರವೇನೆಂಬದೂ ಕುಡಿಯುವದಕ್ಕೆ
ನೀರು ಕೊಡು ಎಂದು ನನಗೆ ಹೇಳಿದವನು ಯಾರೆಂಬದು
ನಿನಗೆ ತಿಳಿದಿದ್ದರೆ ನೀನು ಅವನನ್ನು ಬೇಡಿಕೊಳ್ಳುತ್ತಿದ್ದೀ."
ಯೋಹಾ.4:10

17. "ನಾನು ಕೊಡುವ ನೀರನ್ನು ಕುಡಿಯುವವನಿಗೆ ಎಂದಿಗೂ
ನೀರಡಿಕೆಯಾಗುವದಿಲ್ಲ." ಯೋಹಾ.4:13

18. "ನಾನು ಅವನಿಗೆ ಕೊಡುವ ನೀರು ಅವನಲ್ಲಿ ಉಕ್ಕುವ ಒರತೆಯಾಗಿಯೂ ನಿತ್ಯ ಜೀವವನ್ನುಂಟು ಮಾಡುವದು." ಯೋಹಾ.4:14

19. "ನನ್ನನ್ನು ನಂಬಿರುವವನು ನಿತ್ಯ ಜೀವವನ್ನು ಹೊಂದಿದ್ದಾನೆಂದು ನಿಮಗೆ ನಿಜ ನಿಜವಾಗಿ ಹೇಳುತ್ತೇನೆ." ಯೋಹಾ.6:47

20. "ದುಡಿಯಿರಿ, ಕೆಟ್ಟು ಹೋಗುವ ಆಹಾರಕ್ಕಾಗಿ ದುಡಿಯಬೇಡಿರಿ, ನಿತ್ಯ ಜೀವಕ್ಕೆ ಉಳಿಯುವ ಆಹಾರಕ್ಕಾಗಿ ದುಡಿಯಿರಿ; ಇಂಥ ಆಹಾರವನ್ನು ಮನುಷ್ಯ ಕುಮಾರನು ನಿಮಗೆ ಕೊಡುವನು. ಇದಕ್ಕಾಗಿ ತಂದೆಯಾದ ದೇವರು ಅವನನ್ನು ನೇಮಿಸಿ ಮುದ್ರೆ ಹಾಕಿದ್ದಾನೆ."ಯೋಹಾ.6:27

## 46. ಸತ್ಯವೇದ ವಾಕ್ಯಗಳ ಆಧಾರ.

1. "ಮನುಷ್ಯನು ರೊಟ್ಟಿ ತಿಂದ ಮಾತ್ರದಿಂದ ಬದುಕುವದಿಲ್ಲ, ದೇವರ ಬಾಯಿಂದ ಹೊರಡುವ ಪ್ರತಿಯೊಂದು ಮಾತಿನಿಂದಲೂ ಬದುಕುವನು." ಮತ್ತಾ.4:4

2. "ಜನರು ನಿಮಗೆ ಏನೇನು ಮಾಡಬೇಕೆಂದು ಅಪೇಕ್ಷಿಸುತ್ತೀರೋ ಅದನ್ನೇ ನೀವು ಅವರಿಗೆ ಮಾಡಿರಿ; ಇದೇ ಧರ್ಮಶಾಸ್ತ್ರದ ಮತ್ತು ಪ್ರವಾದಿಗಳ ತಾತ್ಪರ್ಯ." ಮತ್ತಾ.7:12

3. "ನೀವು ಸಹ ಸಂಪ್ರದಾಯದ ನಿಮಿತ್ತ ದೇವರ ಆಜ್ಞೆಗಳನ್ನು ಯಾಕೆ ಮೀರುತ್ತೀರಿ?" ಮತ್ತಾ.15:3

4. "ಮನೆ ಕಟ್ಟುವವರು ಬೇಡವೆಂದು ಬಿಟ್ಟ ಕಲ್ಲೇ ಮುಖ್ಯವಾದ ಮೂಲೆಗಲ್ಲಾಯಿತು. ಇದು ಕರ್ತನಿಂದಲೇ ಆಯಿತು; ಎಂದು ನಿಮಗೆ ಆಶ್ಚರ್ಯವಾಗಿ ತೋರುತ್ತದೆ ಎಂಬುವ ಮಾತನ್ನು ನೀವು ಶಾಸ್ತ್ರದಲ್ಲಿ ಎಂದಾದರೂ ಓದಲಿಲ್ಲವೋ?" ಮತ್ತಾ.21:42

5. "ಮನುಷ್ಯ ಕುಮಾರನು ಹೊರಟು ಹೋಗುತ್ತಾನೆ ಸರಿ, ಹಾಗೆ ಆತನ ವಿಷಯವಾಗಿ ಬರೆದದೆಯಲ್ಲ. ಆದರೆ ಯಾವನು ಮನುಷ್ಯ ಕುಮಾರನನ್ನು ಹಿಡಿದು ಕೊಡುವನೋ ಅವನ ಗತಿಯನ್ನು ಏನು ಹೇಳಲಿ. ಆ ಮನುಷ್ಯನು ಹುಟ್ಟದಿದ್ದರೆ ಅವನಿಗೆ ಒಳ್ಳೇದಾಗಿತ್ತು. ಎಂದು ಹೇಳಿದನು." ಮಾರ್ಕ 14:21

6. "ಅವರು ಮೋಶೆಯ ಮಾತನ್ನು ಪ್ರವಾದಿಗಳ ಮಾತನ್ನೂ ಕೇಳದಿದ್ದರೆ ಸತ್ತು ಹೋಗಿದ್ದವನೊಬ್ಬನು ಜೀವಿತನಾಗಿ ಎದ್ದರು ಅವರು ಒಪ್ಪುವದಿಲ್ಲ ಎಂದು ಹೇಳಿದನು." ಲೂಕ.16:31

7 "ನೋಡಿರಿ, ನಾನು ಯೆರೂಸಲೇಮಿಗೆ ಹೋಗುತ್ತಾ ಇದ್ದೇನೆ; ಮತ್ತು ಮನುಷ್ಯ ಕುಮಾರನ ವಿಷಯವಾಗಿ ಪ್ರವಾದಿಗಳು ಬರೆದದ್ದೆಲ್ಲಾ ಅವನಲ್ಲಿ ನೆರವೇರುವದು." ಲೂಕ 18:31

8. "ನಾನು ಇನ್ನೂ ನಿಮ್ಮ ಸಂಗಡ ಇದ್ದಾಗ ಇದೆಲ್ಲ ನಿಮಗೆ ತಿಳಿಸಲಿಲ್ಲವೇ? ನನ್ನ ವಿಷಯವಾಗಿ ಮೋಶೆಯ ಧರ್ಮಶಾಸ್ತ್ರದಲ್ಲಿಯೂ ಪ್ರವಾದಿಗಳ ಗ್ರಂಥಗಳಲ್ಲಿಯೂ

ಕೀರ್ತನೆಗಳಲ್ಲಿಯೂ ಬರೆದಿರುವದೆಲ್ಲಾ ನೆರವೇರುವದು ಅಗತ್ಯವೆಂದು ನಿಮಗೆ ಹೇಳಲಿಲ್ಲವೇ ಅಂದನು.'' ಲೂಕ.24:44

9. ''ಶಾಸ್ತ್ರಗಳಿಂದ ನಿತ್ಯಜೀವವು ದೊರೆಯುತ್ತದೆಂದು ನೀವು ನೆನಸಿ ಅವುಗಳನ್ನು ವಿಚಾರಿಸುತ್ತೀರಲ್ಲಾ; ಅವುಗಳೂ ನನ್ನ ವಿಷಯದಲ್ಲಿ ಸಾಕ್ಷಿ ಕೊಡುವವುಗಳಾಗಿವೆ.'' ಯೋಹಾ.5:39

10. ''ಅವನು ನನ್ನ ವಿಷಯವಾಗಿ ಬರೆದನು; ಆದದರಿಂದ ನೀವು ಮೋಶೆಯ ಮಾತನ್ನು ನಂಬುವವರಾಗಿದ್ದರೆ ನನ್ನ ಮಾತನ್ನೂ ನಂಬುತ್ತಿದ್ದಿರಿ.''ಯೋಹಾ.5:46

11. ''ಮೋಶೆಯು ನಿಮಗೆ ಧರ್ಮಶಾಸ್ತ್ರವನ್ನು ಕೊಟ್ಟಿದ್ದರೂ ನಿಮ್ಮಲ್ಲಿ ಒಬ್ಬನಾದರೂ ಧರ್ಮಶಾಸ್ತ್ರದಂತೆ ನಡೆಯುವದಿಲ್ಲವಲ್ಲ; ಯಾಕೆ ನನ್ನನ್ನು ಕೊಲ್ಲುವದಕ್ಕೆ ನೋಡುತ್ತೀರಿ.'' ಯೋಹಾ.7:19

12. ''ಇವುಗಳನ್ನು ಇಲ್ಲಿಂದ ತಕ್ಕೊಂಡು ಹೋಗಿರಿ, ನನ್ನ ತಂದೆಯ ಮನೆಯನ್ನು ಸಂತೆ ಮಾಡಬೇಡಿರಿ, ಎಂದು ಹೇಳಿದನು. ಆಗ - ನಿನ್ನ ಆಲಯಾಭಿಮಾನವು ಬೆಂಕಿಯಂತೆ ನನ್ನನ್ನು ದಹಿಸುತ್ತದೆ ಎಂದು ಬರೆದ ಮಾತು ಶಿಷ್ಯರ ನೆನಪಿಗೆ ಬಂತು.''ಯೋಹಾ.2:16

13. ''ಇಬ್ಬರ ಸಾಕ್ಷಿ ನಿಜವಾಗುತ್ತದೆಂಬದಾಗಿ ನಿಮ್ಮ ಧರ್ಮಶಾಸ್ತ್ರದಲ್ಲೇ ಬರೆದದೆ.'' ಯೋಹಾ.8:17

14. “ನನ್ನನ್ನು ಕುರಿತು ನಾನು ಸಾಕ್ಷಿ ಹೇಳುವವನಾಗಿದ್ದೇನೆ. ಅದಲ್ಲದೆ ನನ್ನನ್ನು ಕಳುಹಿಸಿದ ತಂದೆಯೂ ನನ್ನ ವಿಷಯವಾಗಿ ಸಾಕ್ಷಿ ಹೇಳುತ್ತಾನೆ ಅಂದನು.” ಯೋಹಾ.8:18

15. “ನೀವು ದೇವರುಗಳೇ ಎಂದು ನಾನು ಹೇಳಿದೆನು ಎಂಬದಾಗಿ ನಿಮ್ಮ ಧರ್ಮಶಾಸ್ತ್ರದಲ್ಲಿ ಬರೆದದೆಯಲ್ಲಾ; ಶಾಸ್ತ್ರವು ಸುಳ್ಳಾಗಲಾರದಷ್ಟೆ.” ಯೋಹಾ.10:34

16. “ಅವರು ನಿನ್ನನ್ನು ನಿಷ್ಕಾರಣವಾಗಿ ದ್ವೇಷಿಸಿದರು ಎಂದು ಅವರ ಧರ್ಮಶಾಸ್ತ್ರದಲ್ಲಿ ಬರೆದಿರುವ ಮಾತು ನೆರವೇರುವಂತೆ ಹೀಗಾಯಿತು.”ಯೋಹಾ.15:25

17. “ನೀವು ಶಾಸ್ತ್ರವನ್ನಾಗಲಿ ದೇವರ ಶಕ್ತಿಯನ್ನಾದರು ತಿಳಿಯದೆ ತಪ್ಪುವವರಾಗಿದ್ದೀರಿ.”ಮತ್ತಾ.22:29

18. “ನನ್ನನ್ನು ನಂಬುವವನ ಹೊಟ್ಟೆಯೊಳಗಿಂದ ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಜೀವಕರವಾದ ನೀರಿನ ಹೊಳೆಗಳು ಹರಿಯುವವು.” ಯೋಹಾ.7:38

19. “ನನ್ನ ಕೂಡ ಊಟ ಮಾಡುವವನೇ ನನಗೆ ಕಾಲನ್ನು ಅಡ್ಡಗೊಟ್ಟಿದ್ದಾನೆ ಎಂಬ ಶಾಸ್ತ್ರದ ಮಾತು ನೆರವೇರ ಬೇಕಾಗಿದೆ.” ಯೋಹಾ.13:18

20. “ಶಾಸ್ತ್ರದ ಮಾತು ನೆರವೇರುವಂತೆ ನಾಶಕ್ಕೆ ಗುರಿಯಾದ ಆ ಮನುಷ್ಯನೇ ಹೊರತು ಇವರಲ್ಲಿ ಮತ್ತಾರೂ ನಾಶವಾಗಲಿಲ್ಲ.” ಯೋಹಾ.17:12

## 47. ಪುನರುತ್ಥಾನದ ನಂತರ

1. "ಹೆದರ ಬೇಡಿರಿ; ನನ್ನ ಸಹೋದರರ ಬಳಿಗೆ ಹೋಗಿ ಅವರು ಗಲಿಲಾಯಕ್ಕೆ ಹೋಗಬೇಕೆಂದು ಹೇಳಿರಿ; ಅಲ್ಲಿ ನನ್ನನ್ನು ನೋಡುವರು." ಮತ್ತಾ.28:10
2. "ಪರಲೋಕದಲ್ಲಿಯೂ ಭೂಲೋಕದಲ್ಲಿಯೂ ಎಲ್ಲಾ ಅಧಿಕಾರವು ನನಗೆ ಕೊಡಲ್ಪಟ್ಟಿದೆ." ಮತ್ತಾ.28:18
3. "ನೀವು ಹೊರಟು ಹೋಗಿ ಎಲ್ಲಾ ದೇಶಗಳ ಜನರನ್ನು ಶಿಷ್ಯರನ್ನಾಗಿ ಮಾಡಿರಿ; ಅವರಿಗೆ ತಂದೆಯ, ಮಗನ, ಪವಿತ್ರಾತ್ಮನ ಹೆಸರಿನಲ್ಲಿ ದೀಕ್ಷಾಸ್ನಾನ ಮಾಡಿಸಿರಿ." ಮತ್ತಾ.28:19.
4. "ನಾನು ನಿಮಗೆ ಆಜ್ಞಾಪಿಸಿದ್ದನ್ನೆಲ್ಲಾ ಕಾಪಾಡಿಕೊಳ್ಳುವದಕ್ಕೆ ಅವರಿಗೆ ಉಪದೇಶ ಮಾಡಿರಿ."ಮತ್ತಾ.28:20
5. "ನೋಡಿರಿ ನಾನು ಯುಗದ ಸಮಾಪ್ತಿಯವರೆಗೂ ಎಲ್ಲಾ ದಿವಸ ನಿಮ್ಮ ಸಂಗಡ ಇರುತ್ತೇನೆ." ಮತ್ತಾ.28:20
6. "ನೀವು ಲೋಕದ ಎಲ್ಲಾ ಕಡೆಗೆ ಹೋಗಿ ಜಗತ್ತಿಗೆಲ್ಲಾ ಸುವಾರ್ತೆಯನ್ನು ಸಾರಿರಿ." ಮಾರ್ಕ 16:15
7. "ನಂಬಿ ದೀಕ್ಷಾಸ್ನಾನ ಮಾಡಿಸಿಕೊಳ್ಳುವವನು ರಕ್ಷಣೆ ಹೊಂದುವನು; ನಂಬದೆ ಹೋಗುವವನು ದಂಡನೆಗೆ ಗುರಿಯಾಗುವನು." ಮಾರ್ಕ 16:16
8. "ನಂಬುವವರಿಂದ ಈ ಸೂಚಕ ಕಾರ್ಯಗಳು ಉಂಟಾಗುವವು. ನನ್ನ ಹೆಸರನ್ನು ಹೇಳಿ ದೆವ್ವವನ್ನು ಬಿಡಿಸುವರು; ಹೊಸ ಭಾಷೆಗಳಿಂದ ಮಾತಾಡುವರು;"

ಮಾರ್ಕ 16:17

9. "ಹಾವುಗಳನ್ನು ಎತ್ತುವರು; ವಿಷ ಪದಾರ್ಥವನ್ನೇನಾದರೂ ಕುಡಿದರೂ ಅವರಿಗೆ ಯಾವ ಕೇಡು ಆಗುವದಿಲ್ಲ; ಅವರು ರೋಗಿಗಳ ಮೇಲೆ ಕೈಯಿಟ್ಟರೆ ಅವರಿಗೆ ವಾಸಿಯಾಗುವದು." ಮಾರ್ಕ 16:18

10. "ಕ್ರಿಸ್ತನು ಶ್ರಮೆ ಪಟ್ಟು ಸತ್ತು ಮೂರನೇ ದಿನದಲ್ಲಿ ಜೀವಿತನಾಗಿ ಎದ್ದು ಬರುವನೆಂತಲೂ" ಲೂಕ 24:46

11. "ಪಾಪ ಪರಿಹಾರಕ್ಕೋಸ್ಕರವಾಗಿ ದೇವರ ಕಡೆಗೆ ತಿರಿಗಿಕೊಳ್ಳಬೇಕೆಂಬ ಮಾತು ಯೆರೂಸಲೇಮು ಮೊದಲುಗೊಂಡು ಸಮಸ್ತ ದೇಶದವರಿಗೂ ಆತನ ಹೆಸರಿನಲ್ಲಿ ಸಾರಲ್ಪಡುವದೆಂದು ಬರೆದದೆ." ಲೂಕ 24:47

12. "ಇಗೋ ನನ್ನ ತಂದೆಯು ವಾಗ್ದಾನ ಮಾಡಿದ್ದನ್ನು ನಿಮಗೆ ಕಳುಹಿಸಿ ಕೊಡುತ್ತೇನೆ. ದೇವರು ಮೇಲಣ ಲೋಕದಿಂದ ನಿಮಗೆ ಶಕ್ತಿಯನ್ನು ಹೊದಿಸುವ ತನಕ ಈ ಪಟ್ಟಣದಲ್ಲೇ ಕಾದುಕೊಂಡಿರ್ರಿ." ಲೂಕ 24:49

13. "ಯೇಸು ಅವರಿಗೆ- ನಿಮಗೆ ಸಮಾಧಾನವಾಗಲಿ ಎಂದು ತಿರಿಗಿ ಹೇಳಿ - ತಂದೆ ನನ್ನನ್ನು ಕಳುಹಿಸಿಕೊಟ್ಟು ಹಾಗೆಯೇ, ನಾನೂ ನಿಮ್ಮನ್ನು ಕಳುಹಿಸಿ ಕೊಡುತ್ತೇನೆ." ಯೋಹಾ.20:21

14. "ನೀವು ಯಾರ ಪಾಪಗಳನ್ನು ಕ್ಷಮಿಸಿ ಬಿಡುತ್ತೀರೋ ಅವರಿಗೆ ಅವುಗಳ ಕ್ಷಮಾಪಣೆಯಾಗುತ್ತದೆ." ಯೋಹಾ.20:23

15. "ಅಮ್ಮಾ, ಯಾಕೆ ಅಳುತ್ತಿ? ಯಾರನ್ನು ಹುಡುಕುತ್ತೀ ಎಂದು ಕೇಳಲು." ಯೋಹಾ.20:15

16. "ನನ್ನನ್ನು ಹಿಡಿಯ ಬೇಡ; ಯಾಕೆಂದರೆ ನಾನು ಇನ್ನೂ ತಂದೆಯ ಬಳಿಗೆ ಏರಿ ಹೋದವನಲ್ಲ. ನೀನು ನನ್ನ ಸಹೋದರರ ಬಳಿಗೆ ಹೋಗಿ - ನಾನು ನನ್ನ ತಂದೆಯೂ ನಿಮ್ಮ ತಂದೆಯೂ ನನ್ನ ದೇವರೂ ನಿಮ್ಮ ದೇವರೂ ಆಗಿರುವಾತನ ಬಳಿಗೆ ಏರಿ ಹೋಗುತ್ತೇನೆ ಎಂದು ಅವರಿಗೆ ಹೇಳು ಅಂದನು." ಯೋಹಾ.20:17

17. "ಯೋಹಾನನಂತು ನೀರಿನಲ್ಲಿ ದೀಕ್ಷಾಸ್ನಾನ ಮಾಡಿಸಿದನು, ನಿಮಗಾದರೋ ಇನ್ನು ಸ್ವಲ್ಪ ದಿವಸಗಳೊಳಗಾಗಿ ಪವಿತ್ರಾತ್ಮದಲ್ಲಿ ದೀಕ್ಷಾಸ್ನಾನವಾಗುವದು." ಅಪೊ.1:4

18. "ನೀವು ಯೆರೂಸಲೇಮನ್ನು ಬಿಟ್ಟು ಹೋಗದೆ ತಂದೆ ಮಾಡಿದಂಥ ನೀವು ನನ್ನಿಂದ ಕೇಳಿದಂಥ ವಾಗ್ದಾನಕ್ಕೆ ಕಾದುಕೊಂಡಿರ್ರಿ." ಅಪೊ.1:5

19. "ತಂದೆಯು ಸ್ವಂತ ಅಧಿಕಾರದಲ್ಲಿಟ್ಟುಕೊಂಡಿರುವ ಕಾಲಗಳನ್ನೂ ಸಮಯಗಳನ್ನೂ ತಿಳುಕೊಳ್ಳುವದು ನಿಮ್ಮ ಕೆಲಸವಲ್ಲ." ಅಪೊ.1:7

20. "ಪವಿತ್ರಾತ್ಮ ನಿಮ್ಮ ಮೇಲೆ ಬರಲು ನೀವು ಬಲವನ್ನು ಹೊಂದಿ ಯೆರೂಸಲೇಮಿನಲ್ಲಿಯೂ ಎಲ್ಲಾ ಯೂದಾಯ ಸಮಾರ್ಯ ಸೀಮೆಗಳಲ್ಲಿಯೂ ಭೂಲೋಕದ ಕಟ್ಟಕಡೆಯವರೆಗೂ ನನಗೆ ಸಾಕ್ಷಿಗಳಾಗಿರಬೇಕು."ಅಪೊ.1:8

## 48. ಬರೋಣದ ದೃಷ್ಟಾಂತಗಳು.

1. "ಎಲ್ಲಾ ದೇಶಗಳ ಜನರು ಆತನ ಮುಂದೆ ಕೂಡಿಸಲ್ಪಡುವರು. ಕುರುಬನು ಆಡುಗಳನ್ನೂ ಕುರಿಗಳನ್ನೂ ಬೇರೆ ಬೇರೆ ಮಾಡುವ ಪ್ರಕಾರ ಆತನು ಅವರನ್ನು ಬೇರೆ ಬೇರೆ ಮಾಡಿ ಕುರಿಗಳನ್ನು ತನ್ನ ಬಲಗಡೆಯಲ್ಲಿ ಆಡುಗಳನ್ನು ಎಡಗಡೆಯಲ್ಲಿ ನಿಲ್ಲಿಸುವನು." ಮತ್ತಾ.25:32,33

2. "ಒಬ್ಬ ಮನುಷ್ಯನು ತನ್ನ ಮನೆಯಿಂದ ಬೇರೊಂದು ದೇಶಕ್ಕೆ ಹೋಗುವಾಗ ತನ್ನ ಆಳುಗಳಿಗೆ ಅವನವನ ಕೆಲಸವನ್ನು ನೇಮಿಸಿ ಬಾಗಿಲು ಕಾಯುವವನನ್ನು ಕರೆದು - ನೀನು ಎಚ್ಚರವಾಗಿರಬೇಕೆಂದು ಅಪ್ಪಣೆ ಕೊಡುವ ಪ್ರಕಾರ" ಮಾರ್ಕ.13:34

3. "ಆ ರಾತ್ರಿಯಲ್ಲಿ ಒಂದೇ ಮಂಚದ ಮೇಲೆ ಇಬ್ಬರಿರುವರು; ಒಬ್ಬನು ತೆಗೆದುಕೊಳ್ಳಲ್ಪಡುವನು. ಮತ್ತೊಬ್ಬನು ಬಿಡಲ್ಪಡುವನು." ಲೂಕ 17:34

4. "ಇಬ್ಬರು ಹೆಂಗಸರು ಒಂದೇ ಕಲ್ಲಲ್ಲಿ ಬೀಸುತ್ತಿರುವರು. ಒಬ್ಬಳು ತೆಗೆದುಕೊಳ್ಳಲ್ಪಡುವಳು, ಮತ್ತೊಬ್ಬಳು ಬಿಡಲ್ಪಡುವಳು."ಲೂಕ 17:35

5. "ಮನುಷ್ಯ ಕುಮಾರನು ಪ್ರತ್ಯಕ್ಷವಾಗುವ ದಿವಸದಲ್ಲಿ ಅದೇ ರೀತಿಯಾಗಿ ಇರುವದು. ಆ ದಿನದಲ್ಲಿ ಮಾಳಿಗೆಯ ಮೇಲೆ ಇರುವವನು ಮನೆಯೊಳಗಿರುವ ತನ್ನ ವಸ್ತುಗಳನ್ನು ತೆಗೆದುಕೊಳ್ಳಲು ಇಳಿದು ಬರಬಾರದು; ಅದೇ ಪ್ರಕಾರ ಹೊಲದಲ್ಲಿರುವವನು ಸಹ ತಿರಿಗಿ ಹಿಂದಕ್ಕೆ

ಹೋಗಬಾರದು.'' ಲೂಕ 17:30,31

6. ''ಮಿಂಚು ಮಿಂಚುತ್ತಾ ಆಕಾಶದಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಯವರೆಗೂ ಹೇಗೆ ಹೊಳೆಯುವದೋ ಹಾಗೆಯೇ ಮನುಷ್ಯ ಕುಮಾರನು ತನ್ನ ದಿನದಲ್ಲಿರುವನು.'' ಲೂಕ 17:24

7. ''ನಿಮ್ಮ ನಡುಗಳು ಕಟ್ಟಿರಲಿ; ನಿಮ್ಮ ದೀವಟಿಗೆಗಳು ಉರಿಯುತ್ತಾ ಇರಲಿ; ನೀವಂತು ತಮ್ಮ ಯಜಮಾನನು ಬಂದು ತಟ್ಟಿದ ಕೂಡಲೇ ಕದವನ್ನು ತೆರೆಯುವದಕ್ಕೆ ಸಿದ್ಧವಾಗಿದ್ದು ಮದುವೇ ಊಟವನ್ನು ಯಾವಾಗ ತೀರಿಸಿಕೊಂಡು ಬರುವನೋ ಎಂದು ಅವನನ್ನು ಎದುರು ನೋಡುತ್ತಿರುವ ಮನುಷ್ಯನಂತಿರಿ.'' ಲೂಕ 12:3

8. ''ಅಂಜೂರ ಮುಂತಾದ ಮರಗಳನ್ನೂ ನೋಡಿರಿ; ಅವು ಚಿಗುರಿದ ಕೂಡಲೇ ನೀವು ಅದನ್ನು ಕಂಡು ಈಗ ಬೇಸಿಗೆಯು ಹತ್ತಿರವಾಯಿತೆಂದು ನೀವಾಗಿ ತಿಳಿದುಕೊಳ್ಳುತ್ತಿರಲ್ಲಾ; ಹಾಗೆಯೇ ನೀವು ಸಹ ಇವುಗಳಾಗುವದನ್ನು ನೋಡುವಾಗ ದೇವರ ರಾಜ್ಯವು ಹತ್ತಿರವಾಯಿತೆಂದು ತಿಳುಕೊಳ್ಳಿರಿ.'' ಲೂಕ 21: 24-31

## 49. ಪರಲೋಕ ರಾಜ್ಯದ ಸಾಮ್ಯಗಳು.

1. ''ಪರಲೋಕ ರಾಜ್ಯವು ಒಳ್ಳೆಯ ಬೀಜವನ್ನು ತನ್ನ ಹೊಲದಲ್ಲಿ ಬಿತ್ತಿದ್ದ ಒಬ್ಬ ಮನುಷ್ಯನಿಗೆ ಹೋಲಿಕೆಯಾಗಿದ್ದಾನೆ.'' ಮತ್ತಾ.13:24

2. "ಪರಲೋಕ ರಾಜ್ಯವು ಸಾಸಿವೆ ಕಾಳಿಗೆ ಹೋಲಿಕೆಯಾಗಿದೆ." ಮತ್ತಾ.13:31
3. "ಪರಲೋಕ ರಾಜ್ಯವು ಹುಳಿಹಿಟ್ಟಿಗೆ ಹೋಲಿಕೆಯಾಗಿದೆ. ಅದನ್ನು ಒಬ್ಬ ಹೆಂಗಸು ತಕ್ಕೊಂಡು ಮೂರು ಸೇರು ಹಿಟ್ಟಿನಲ್ಲಿ ಕಲಿಸಿಡಲು ಆ ಹಿಟ್ಟೆಲ್ಲಾ ಹುಳಿಯಾಯಿತು." ಮತ್ತಾ.13:33
4. "ಪರಲೋಕ ರಾಜ್ಯವು ಹೊಲದಲ್ಲಿ ಹೂಳಿಟ್ಟ ದ್ರವ್ಯಕ್ಕೆ ಹೋಲಿಕೆಯಾಗಿದೆ. ಒಬ್ಬನು ಅದನ್ನು ಕಂಡುಕೊಂಡು ಮುಚ್ಚಿಬಿಟ್ಟು ಅದರಿಂದಾದ ಸಂತೋಷದಿಂದ ತನ್ನ ಬದುಕನ್ನೆಲ್ಲಾ ಮಾರಿ ಆ ಹೊಲವನ್ನು ಕೊಂಡುಕೊಂಡನು." ಮತ್ತಾ.13:44
5. "ಪರಲೋಕ ರಾಜ್ಯವು ಉತ್ತಮವಾದ ಮುತ್ತುಗಳನ್ನು ಹುಡುಕುವ ವ್ಯಾಪಾರಸ್ಥನಿಗೆ ಹೋಲಿಕೆಯಾಗಿದೆ. ಅವನು ಬಹು ಬೆಲೆಯುಳ್ಳ ಒಂದು ಮುತ್ತನ್ನು ಕಂಡು ತನ್ನ ಬದುಕನ್ನೆಲ್ಲಾ ಮಾರಿ ಬಂದು ಅದನ್ನು ಕೊಂಡುಕೊಂಡನು." ಮತ್ತಾ.13:45,46
6. ಪರಲೋಕ ರಾಜ್ಯವು ಒಂದು ಬಲೆಗೆ ಹೋಲಿಕೆಯಾಗಿದೆ. ಅದನ್ನು ಸಮುದ್ರದಲ್ಲಿ ಹಾಕಿ ಎಲ್ಲ ಜಾತಿಯ ಮೀನುಗಳನ್ನು ಹಿಡಿದರು." ಮತ್ತಾ.13:47
7. "ಪರಲೋಕ ರಾಜ್ಯವು ತನ್ನ ಸೇವಕರಿಂದ ಲೆಕ್ಕವನ್ನು ತೆಗೆದು ಕೊಳ್ಳಬೇಕೆಂದಿದ್ದ ಒಬ್ಬ ಅರಸನಿಗೆ ಹೋಲಿಕೆಯಾಗಿದೆ." ಮತ್ತಾ.18:23

8. ‘‘ಪರಲೋಕ ರಾಜ್ಯವು ಒಬ್ಬ ಮನೆಯ ಯಜಮಾನನಿಗೆ ಹೋಲಿಕೆಯಾಗಿದೆ. ಮತ್ತಾ.20:1

9. ‘‘ಪರಲೋಕ ರಾಜ್ಯವು ಆರತಿಗಳನ್ನು ತೆಗೆದುಕೊಂಡು ಮದಲಿಂಗನನ್ನು ಎದುರುಗೊಳ್ಳುವದಕ್ಕೆ ಹೊರಟಂಥ ಹತ್ತು ಮಂದಿ ಕನ್ಯೆಯರಿಗೆ ಹೋಲಿಕೆಯಾಗಿದೆ.’’ ಮತ್ತಾ.25:1

10. ‘‘ಪರಲೋಕ ರಾಜ್ಯವು ಮಗನಿಗೆ ಮದುವೆ ಮಾಡಿದ ಒಬ್ಬ ಅರಸನಿಗೆ ಹೋಲಿಕೆಯಾಗಿದೆ. ’’ ಮತ್ತಾ.22:2

11. ‘‘ಪರಲೋಕ ರಾಜ್ಯವು ದೇಶಾಂತರಕ್ಕೆ ಹೋಗುವ ಒಬ್ಬ ಮನುಷ್ಯನು ತನ್ನ ಆಳುಗಳನ್ನು ಕರೆದು ಅವರಿಗೆ ತನ್ನ ಆಸ್ತಿಯನ್ನು ಒಪ್ಪಿಸಿ ಕೊಟ್ಟಂತಿರುವದು.’’ಮತ್ತಾ.25:14

12. ‘‘ಒಬ್ಬನು ಭೂಮಿಯಲ್ಲಿ ಬೀಜವನ್ನು ಹಾಕಿ ರಾತ್ರಿ ಮಲಗುತ್ತಾ ಹಗಲು ಎದ್ದಿರುತ್ತಾ ಇರಲು ಅವನಿಗೆ ತಿಳಿಯದ ರೀತಿಯಲ್ಲಿ ಆ ಬೀಜವು ಹುಟ್ಟಿ ಬೆಳೆಯುವದು. ಇದರಂತೆ ದೇವರ ರಾಜ್ಯ. ಮಾರ್ಕ 4:26

## 50. ಬರೋಣದ ಸೂಚನೆಗಳು.

1. ‘‘ಯುದ್ಧಗಳಾಗುವದನ್ನೂ ಯುದ್ಧವಾಗುವ ಹಾಗಿದೆ ಎಂಬ ಸುದ್ದಿಗಳನ್ನು ನೀವು ಕೇಳಬೇಕಾಗಿರುವದು. ಕಳವಳ ಪಡದಂತೆ ನೋಡಿಕೊಳ್ಳಿರಿ; ಯಾಕೆಂದರೆ ಹಾಗಾಗುವದು ಅಗತ್ಯ.’’ ಮತ್ತಾ.24:6

2. ''ಪರಲೋಕ ರಾಜ್ಯದ ಈ ಸುವಾರ್ತೆಯು ಸರ್ವಲೋಕ ದಲ್ಲಿ ಎಲ್ಲಾ ಜನಾಂಗಗಳಿಗೆ ಸಾಕ್ಷಿಗಾಗಿ ಸಾರಲಾಗುವದು, ಆಗ ಅಂತ್ಯವು ಬರುವದು.'' ಮತ್ತಾ.24:14

3. ''ಇಗೋ ಕ್ರಿಸ್ತನು ಇಲ್ಲಿದ್ದಾನೆ, ಅದೋ ಅಲ್ಲಿದ್ದಾನೆ ಎಂದು ಹೇಳಿದರೆ ನಂಬಬೇಡಿರಿ,'' ಮತ್ತಾ.4:14

4. ''ಮಿಂಚು ಮೂಡಣದಲ್ಲಿ ಹುಟ್ಟಿ ಪಡುವಣದವರೆಗೂ ಕಾಣಿಸುತ್ತದೋ ಹಾಗೆಯೆ ಮನುಷ್ಯ ಕುಮಾರನ ಪ್ರತ್ಯಕ್ಷತೆಯು ಇರುವದು.''ಮತ್ತಾ.24:27

5. ''ಆ ದಿನಗಳ ಸಂಕಟವು ತೀರಿದ ಕೂಡಲೆ ಸೂರ್ಯನು ಕತ್ತಲಾಗಿ ಹೋಗುವನು. ಚಂದ್ರನು ಬೆಳಕು ಕೊಡದೆ ಇರುವನು. ನಕ್ಷತ್ರಗಳು ಆಕಾಶದಿಂದ ಉದುರುವವು. ಆಕಾಶದ ಶಕ್ತಿಗಳು ಕದಲುವವು.'' ಮತ್ತಾ.24:29

6. ''ಆಗ ಮನುಷ್ಯ ಕುಮಾರನು ಸೂಚಿಸುವ ಗುರುತು ಆಕಾಶದಲ್ಲಿ ಕಾಣ ಬರುವದು. ಆಗ ಭೂಲೋಕದಲ್ಲಿರುವ ಎಲ್ಲಾ ಕುಲದವರು ಎದೆ ಬಡಕೊಳ್ಳುವರು ಮತ್ತು ಮನುಷ್ಯಕುಮಾರನು ಬಲದಿಂದಲೂ ಬಹು ಮಹಿಮೆಯಿಂದಲೂ ಆಕಾಶದ ಮೇಘಗಳ ಮೇಲೆ ಬರುವದನ್ನು ಕಾಣುವರು.'' ಮತ್ತಾ.24:30

7. ''ಆತನು ತುತುರಿಯ ಮಹಾ ಶಬ್ಧದಿಂದ ತನ್ನ ದೂತರನ್ನು ಕಳುಹಿಸುವನು.'' ಮತ್ತ.24:31

8. ''ನೀವೂ ಸಹ ಇದನ್ನೆಲ್ಲಾ ನೋಡುವಾಗ ಆ ದಿನವು ಹತ್ತಿರವದೆ, ಬಾಗಿಲಲ್ಲೇ ಅದೆ ಎಂದು

ತಿಳುಕೊಳ್ಳಿರಿ.''ಮತ್ತಾ.24:33

9. ''ಆ ದಿನವು ವಿಷಯವೂ ಆ ಗಳಿಗೆಯ ವಿಷಯವೂ ನನ್ನ ತಂದೆಯೊಬ್ಬನಿಗೆ ತಿಳಿಯುವದೇ ಹೊರತು ಮತ್ತಾರಿಗೂ ತಿಳಿಯದು.'' ಮತ್ತಾ.24:36

10. ''ಆ ದಿನವಾದರೂ ಗಳಿಗೆಯಾದರೂ ನಿಮಗೆ ಗೊತ್ತಿಲ್ಲವಾದದರಿಂದ ಎಚ್ಚರವಾಗಿರ್ರಿ.'' ಮತ್ತಾ.25:13

11. ''ನೀವೂ ಸಹ ಸಿದ್ದರಾಗಿರ್ರಿ. ನೀವು ನೆನಸದ ಗಳಿಗೆಯಲ್ಲಿ ಮನುಷ್ಯ ಕುಮಾರನು ಬರುತ್ತಾನೆ ಅಂದನು.'' ಲೂಕ.12:40

12. ''ಯಜಮಾನನು ಬಂದು ಯಾವ ಯಾವ ಆಳುಗಳು ಎಚ್ಚರವಾಗಿರುವದನ್ನು ಕಂಡುಕೊಳ್ಳುವನೋ ಆ ಆಳುಗಳೇ ಧನ್ಯರು.''ಲುಕ 12:37

13. ''ನೀವಂತು ನಿಮ್ಮ ಯಜಮಾನನು ತಟ್ಟಿದ ಕೂಡಲೇ - ಕದವನ್ನು ತೆರೆಯುವದಕ್ಕೆ ಸಿದ್ಧವಾಗಿದ್ದು ಮದುವೆ ಊಟವನ್ನು ಯಾವಾಗ ತೀರಿಸಿಕೊಂಡು ಬರುವನೋ ಎಂದು ಅವನನ್ನು ಎದುರು ನೋಡುವ ಮನುಷ್ಯನಂತಿರಿ.'' ಲೂಕ13:36

14. ''ಸುಳ್ಳು ಕ್ರಿಸ್ತರು ಸುಳ್ಳು ಪ್ರವಾದಿಗಳೂ ಎದ್ದು ಸಾಧ್ಯವಾದರೆ ದೇವರಾದುಕೊಂಡವರನ್ನು ಸಹ ಮೋಸಗೊಳಿಸುವದಕ್ಕೋಸ್ಕರ ದೊಡ್ಡ ದೊಡ್ಡ ಸೂಚಕ ಕಾರ್ಯಗಳನ್ನೂ ಅದ್ಭುತ ಕಾರ್ಯಗಳನ್ನೂ ಮಾಡಿ ತೋರಿಸುವರು.'' ಮತ್ತಾ.24:24

15. ''ನೋಹನ ದಿನಗಳಲ್ಲಿ ನಡೆದ ಹಾಗೆಯೇ ಮನುಷ್ಯ ಕುಮಾರನ ದಿನಗಳಲ್ಲಿಯೂ ನಡೆಯುವದು.'' ಲೂಕ.17:26

16. ''ನೋಹನು ನಾವೆಯಲ್ಲಿ ಸೇರಿದ ದಿನದ ತನಕ ಜನರು ಊಟ ಮಾಡುತ್ತಿದ್ದರು. ಕುಡಿಯುತ್ತಿದ್ದರು, ಮದುವೆ ಮಾಡಿಕೊಳ್ಳುತ್ತಿದ್ದರು. ಆಗ ಜಲಪ್ರಳಯವು ಬಂದು ಎಲ್ಲರನ್ನು ನಾಶ ಮಾಡಿತು.'' ಲೂಕ 17:27

17. ''ಲೋಟನ ದಿವಸಗಳಲ್ಲಿ ನಡೆದ ಪ್ರಕಾರ ನಡೆಯುವದು. ಅವರು ಊಟ ಮಾಡುತ್ತಿದ್ದರು, ಕುಡಿಯುತ್ತಿದ್ದರು, ಕೊಳ್ಳುತ್ತಿದ್ದರು, ಮಾರುತ್ತಿದ್ದರು, ನೆಡುತ್ತಿದ್ದರು, ಕಟ್ಟುತ್ತಿದ್ದರು.'' ಲೂಕ 17:28

18. ''ಆದರೆ ಲೋಟನು ಸೊದೋಮ್ ಊರನ್ನು ಬಿಟ್ಟು ಹೋದ ದಿವಸದಲ್ಲಿ ಆಕಾಶದಿಂದ ಬೆಂಕಿ ಗಂಧಕಗಳು ಸುರಿದು ಅವರೆಲ್ಲರನ್ನೂ ನಾಶ ಮಾಡಿದವು. ಮನುಷ್ಯ ಕುಮಾರನು ಪ್ರತ್ಯಕ್ಷವಾಗುವ ದಿವಸದಲ್ಲಿ ಅದೇ ರೀತಿಯಾಗಿ ಇರುವದು.'' ಲೂಕ 17:29, 30

19. ''ಇದೆಲ್ಲಾ ಆಗುವ ತನಕ ಈ ಸಂತತಿಯು ಅಳಿದು ಹೋಗುವದೇ ಇಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ.'' ಮತ್ತಾ.24:34

20. ''ಮನುಷ್ಯ ಕುಮಾರನು ತನ್ನ ತಂದೆಯ ಪ್ರಭಾವದೊಡನೆ ತನ್ನ ದೂತರ ಸಮೇತವಾಗಿ ಬರುವನು; ಆವಾಗ ಆತನು ಒಬ್ಬೊಬ್ಬನಿಗೆ ಅವನವನ ನಡತೆಗೆ ತಕ್ಕ ಫಲವನ್ನು

ಕೊಡುವನು.'' ಮತ್ತಾ.16:27

## 51. ನ್ಯಾಯ ತೀರ್ಪಿನ ದಿನ.

1. ''ನನ್ನನ್ನು ಲಕ್ಷ್ಯ ಮಾಡದೆ ನನ್ನ ಮಾತುಗಳನ್ನು ಅಂಗೀಕರಿಸದೆ ಇರುವವನಿಗೆ ತೀರ್ಪು ಮಾಡುವಂಥದ್ದು ಒಂದು ಇದೆ.'' ಯೋಹಾ.12:48

2. ''ನಾನು ಆಡಿದ ಮಾತು; ಅದೇ ಅವನಿಗೆ ಕಡೇ ದಿನದಲ್ಲಿ ತೀರ್ಪು ಮಾಡುವದು.'' ಯೋಹಾ.12:48

3. ''ಮನುಷ್ಯನು ಸುಮ್ಮನೆ ಆಡುವ ಪ್ರತಿಯೊಂದು ಮಾತಿನ ವಿಷಯವಾಗಿ ನ್ಯಾಯವಿಚಾರಣೆಯ ದಿನದಲ್ಲಿ ಉತ್ತರ ಕೊಡಬೇಕು.'' ಮತ್ತಾ.12:36

4. ''ನಿನ್ನ ಮಾತುಗಳಿಂದಲೇ ನೀತಿವಂತನೆಂದು ತೀರ್ಪು ಹೊಂದುವಿ. ನಿನ್ನ ಮಾತುಗಳಿಂದಲೆ ಅಪರಾಧಿಯೆಂದು ತೀರ್ಪು ಹೊಂದುವಿ.''ಮತ್ತಾ.12:37

5. ''ಹೇಗೆ ಹಣಜಿಯನ್ನು ಆರಿಸಿ ತೆಗೆದು ಸುಟ್ಟು ಬಿಡುತ್ತಾರೋ, ಹಾಗೆಯೇ ಯುಗದ ಸಮಾಪ್ತಿಯಲ್ಲಿ ನಡೆಯುವದು.'' ಮತ್ತಾ.13:40

6. ''ಮನುಷ್ಯ ಕುಮಾರನು ತನ್ನ ದೂತರನ್ನು ಕಳುಹಿಸುವನು; ಅವರು ಆತನ ರಾಜ್ಯದೊಳಗಿನ ಎಲ್ಲಾ ಕಂಟಕರನ್ನೂ ಅಧರ್ಮಿಗಳನ್ನೂ ಕೂಡಿಸಿ ಬೆಂಕೀಕೊಂಡದಲ್ಲಿ ಹಾಕುವರು. ಅಲ್ಲಿ ಗೋಳಾಟವು ಹಲ್ಲು ಕಡಿಯೋಣವೂ ಇರುವವು.'' ಮತ್ತಾ.13:42

7. "ಮನುಷ್ಯ ಕುಮಾರನು ತನ್ನ ಮಹಿಮೆಯಿಂದ ಎಲ್ಲಾ ದೂತರೊಂದಿಗೆ ಕೂಡಿ ಬರುವಾಗ ತನ್ನ ಮಹಿಮೆಯ ಸಿಂಹಾಸನದಲ್ಲಿ ಕೂತುಕೊಳ್ಳುವನು." ಮತ್ತಾ.25:31

8. "ಮಗನು ಮನುಷ್ಯ ಕುಮಾರನಾಗಿರುವದರಿಂದ ತೀರ್ಪು ಮಾಡುವ ಅಧಿಕಾರವನ್ನು ಅವನಿಗೆ ಕೊಟ್ಟನು." ಯೋಹಾ.5:27

9. "ಎಲ್ಲಾ ದೇಶದ ಜನರೂ ಆತನ ಮುಂದೆ ಕೂಡಿಸಲ್ಪಡುವರು."ಮತ್ತಾ.25:32

10. "ಕುರುಬರು ಆಡುಗಳನ್ನು ಕುರಿಗಳನ್ನು ಬೇರೆ ಬೇರೆ ಮಾಡುವ ಪ್ರಕಾರ ಆತನು ಅವರನ್ನು ಬೇರೆ ಬೇರೆ ಮಾಡಿ" ಮತ್ತಾ.5:32

11. "ಕುರಿಗಳನ್ನು ತನ್ನ ಬಲಗಡೆಯಲ್ಲಿ ಆಡುಗಳನ್ನು ತನ್ನ ಎಡಗಡೆಯಲ್ಲಿ ನಿಲ್ಲಿಸುವನು." ಮತ್ತಾ.25:33

12. "ಆಗ ಅರಸನು ತನ್ನ ಬಲಗಡೆಯಲ್ಲಿರುವವರಿಗೆ - ನನ್ನ ತಂದೆಯ ಆಶೀರ್ವಾದ ಹೊಂದಿದವರೇ ಬನ್ನಿರಿ; ಲೋಕಾಧಿಯಿಂದ ನಿಮಗೋಸ್ಕರ ಸಿದ್ಧ ಮಾಡಿದ ರಾಜ್ಯವನ್ನು ಸ್ವಾಸ್ಥ್ಯವಾಗಿ ತೆಗೆದುಕೊಳ್ಳಿರಿ ಎನ್ನುವನು." ಮತ್ತಾ.25:34

13. "ಎಡಗಡೆಯಲ್ಲಿರುವವರಿಗೆ ಶಾಪಗ್ರಸ್ತರೇ, ನನ್ನನ್ನು ಬಿಟ್ಟು ಪಿಶಾಚನಿಗೂ ಅವನ ದೂತರಿಗೂ ಸಿದ್ಧ ಮಾಡಿರುವ ನಿತ್ಯ ಬೆಂಕಿಯೊಳಕ್ಕೆ ಹೋಗಿರಿ ಅನ್ನುವನು." ಮತ್ತಾ.25:41

14. "ಇವರು ನಿತ್ಯ ಶಿಕ್ಷೆಗೂ ನೀತಿವಂತರು ನಿತ್ಯ ಜೀವಕ್ಕೂ

ಹೋಗುವರು.'' ಮತ್ತಾ.25:46

15. ''ಮನುಷ್ಯ ಕುಮಾರನು ತನ್ನ ತಂದೆಯ ಪ್ರಭಾವದೊಡನೆ ತನ್ನ ದೂತರ ಸಮೇತವಾಗಿ ಬರುವನು; ಆವಾಗ ಒಬ್ಬೊಬ್ಬನಿಗೂ ಅವನವನ ನಡತೆಗೆ ತಕ್ಕ ಫಲವನ್ನು ಕೊಡುವನು.'' ಮತ್ತಾ.16:27

16. ''ಈ ಪ್ರಕಾರ ಕಡೆಯವರು ಮೊದಲಿನವರಾಗುವರು. ಮೊದಲಿನವರು ಕಡೆಯವರಾಗುವರು.'' ಮತ್ತಾ.20:16

17. ''ತನ್ನ ಯಜಮಾನನ ಚಿತ್ತವನ್ನು ತಿಳಿದ ಆಳು ಸಿದ್ಧ ಮಾಡದೆ ಹೋದರೆ ಅಥವಾ ಅವನ ಚಿತ್ತಕ್ಕನುಸಾರ ನಡೆಯದಿದ್ದರೆ ಅವನು ಬಹು ಪೆಟ್ಟು ತಿನ್ನುವನು.'' ಲೂಕ 12:47

18. ''ತಿಳಿಯದೆ ಪೆಟ್ಟುಗಳಿಗೆ ಯೋಗ್ಯವಾದದ್ದನ್ನು ನಡಿಸಿದವನು ಸ್ವಲ್ಪ ಪೆಟ್ಟು ತಿನ್ನುವನು.'' ಲೂಕ 12:48

19. ''ಯಾವನಿಗೆ ಬಹಳವಾಗಿ ಕೊಡಲ್ಪಟ್ಟಿದೆಯೋ ಅವನ ಕಡೆಯಿಂದ ಬಹಳವಾಗಿ ನಿರೀಕ್ಷಿಸಲ್ಪಡುವದು. ಇದಲ್ಲದೆ ಯಾವನ ವಶಕ್ಕೆ ಬಹಳವಾಗಿ ಒಪ್ಪಿಸಿದೆಯೋ ಅವನ ಕಡೆಯಿಂದ ಇನ್ನೂ ಹೆಚ್ಚಾಗಿ ಕೇಳುವರು.'' ಲೂಕ 12:48

20. ''ಎಲ್ಲರೂ ತನಗೆ ಮಾನ ಕೊಡುವ ಪ್ರಕಾರವೇ ಮಗನಿಗೂ ಮಾನ ಕೊಡಬೇಕೆಂದು ತಂದೆಯು ಇಚ್ಛೈಸುತ್ತಾನೆ. ಇದಲ್ಲದೆ ತಂದೆಯು ಯಾರಿಗೂ ತೀರ್ಪು ಮಾಡುವದು ಇಲ್ಲ; ತೀರ್ಪು ಮಾಡುವ ಅಧಿಕಾರವನ್ನೆಲ್ಲಾ ಮಗನಿಗೆ ಕೊಟ್ಟಿದ್ದಾನೆ. ಯೋಹಾ.5:22,23

ನಿಮ್ಮೊಂದಿಗೆ ಒಂದು ಗಳಿಗೆ,

ಈ ಪುಸ್ತಕವು ನಮ್ಮ ಪಾಪಗಳಿಗಾಗಿ ಸತ್ತು ಮೂರನೇ ದಿವಸದಲ್ಲಿ ಮೃತ್ಯುಂಜಯನಾಗಿ ಎದ್ದು ಬಂದಂಥ ಯೇಸು ಕ್ರಿಸ್ತನಿಗೆ ಅರ್ಪಿತವಾಗಿದೆ. 'ಇಗೋ ಬಾಗಿಲಲ್ಲಿ ನಿಂತು ಕೊಂಡು ತಟ್ಟುತ್ತಾ ಇದ್ದೇನೆ. ಯಾವನಾದರೂ ನನ್ನ ಶಬ್ಧವನ್ನು ಕೇಳಿ ಬಾಗಿಲನ್ನು ತೆರೆದರೆ ನಾನು ಒಳಗೆ ಬಂದು ಅವನ ಸಂಗಡ ಊಟ ಮಾಡುವೆನು. ಅವನು ನನ್ನ ಸಂಗಡ ಊಟ ಮಾಡುವನು.' ಪ್ರಕಟನೆ 3:20.

ಈ ಪುಸ್ತಕವನ್ನು ಓದುವಂಥ ಪ್ರಿಯರೇ, ಯೇಸುವನ್ನು ನಿಮ್ಮ ಸ್ವಂತ ರಕ್ಷಕನನ್ನಾಗಿ ಸ್ವೀಕರಿಸಿ, ಯೇಸುವಿನ ಸಂಗಡ ಊಟಮಾಡಲು ಸಿದ್ಧರಾಗಿದ್ದೀರೋ?

ಈ ಪುಸ್ತಕ ಬರೆದು ಪ್ರಕಟಿಸಲು ನೆನಸಿದಾಗ ಇದರ ಪ್ರಕಟನೆಗೆ ಸಹಾಯ ಮಾಡಲು ಒಂದು ಕುಟುಂಬದವರು ಸಂತೋಷದಿಂದ ಮುಂದೆ ಬಂದರು. ಅವರ ತ್ಯಾಗಮಯವಾದ ಸಹಾಯದಿಂದ ಈ ಪುಸ್ತಕವನ್ನು ಪ್ರಕಟಿಸಲು ಸಾಧ್ಯವಾಯಿತು.

**Mr. Ravindra Kumar & Family**
Mysore - 570 023

ಈ ಪುಸ್ತಕದ ಮೂಲಕ ಬರುವ ಒಂದೊಂದು ಆಶೀರ್ವದವೂ ಅವರ ಕುಟುಂಬದವರಿಗೆ ಆಗಲಿ. ಕರ್ತನು ಪರಲೋಕ ದ್ವಾರವನ್ನು ತೆರೆದು ವಿಶೇಷವಾಗಿ ಅವರನ್ನು ಆಶೀರ್ವದಿಸಲಿ.

ಜೆ. ಸ್ಯಾಮ್ ಜೆಬದುರೈ

# ಓದಿರುವಿರಾ?

| | | |
|---|---|---|
| 1. | ಎಲ್ಲಿ?ಎಲ್ಲಿ?ಎಲ್ಲಿ? | 6-00 |
| 2. | ಕಲ್ವಾರಿಯ ಹಾದಿಯಲ್ಲಿ ನೀನು | 6-00 |
| 3. | ಉಪವಾಸದ ಬಲ | 6-00 |
| 4. | ಸ್ತುತಿಯ ಮಹಿಮೆ | 6-00 |
| 5. | ಮಧುರವಾದ 60 ಸಣ್ಣ ಕಥೆಗಳು | 6-00 |
| 6. | ಇಂಡೋನೇಶಿಯಾದಲ್ಲಿ ಭಕ್ತಿಸಂಜೀವನ | 6-00 |
| 7. | ಶಾಪಗಳನ್ನು ಮುರಿಯುವದು ಹೇಗೆ? | 6-00 |
| 8. | ಪರಿಶುದ್ಧ ಜೀವಿತ ನಡೆಸುವದು ಹೇಗೆ? | 6-00 |
| 9. | ನನ್ನ ಕಣ್ಣುಗಳು ನೋಡಿದವು | 6-00 |
| 10 | ಅಗ್ನಿ ಸ್ಪರ್ಶದ ಅನುಭವಗಳು | 6-00 |
| 11. | ಸಹೋದರ ಶಂಕರನನ್ನು ಸಂಧಿಸಿದ ಯೇಸು | 6-00 |
| 12. | ಇನ್ನು ಮೇಲೆ ಸಂಭವಿಸುವದೇನು? | 6-00 |
| 13. | ಪ್ರಾರ್ಥಿಸೋಣವೇ? | 6-00 |
| 14. | ಗುಣಪಡಿಸುವ ಯೇಸು | 6-00 |
| 15. | ದೀಕ್ಷಾಸ್ನಾನ ಅನಿವಾರ್ಯವೇ? | 6-00 |
| 16. | ಸ್ತುತಿಯ ಮೂಲಕ ಜಯ | 6-00 |
| 17. | ಭಯಪಡಬೇಡ | 6-00 |
| 18. | ಅಭಿಷೇಕಿಸು ಕರ್ತನೇ | 6-00 |
| 19. | ಅಶುದ್ಧಾತ್ಮಗಳನ್ನು ಬಿಡಿಸುವದು ಹೇಗೆ? | 6-00 |
| 20. | ಕೊರತೆಪಡೆನು | 6-00 |
| 21. | ನಿಮ್ಮ ಕಿವಿಗಳು ಕೇಳಲಿ | 6-00 |
| 22. | ಪ್ರಾರ್ಥನೆಯೂ ಉಜ್ಜೀವನವೂ | 6-00 |
| 23. | ನಮ್ಮ ಯುದ್ಧಾಯುಧಗಳು | 6-00 |
| 24. | ಪ್ರಾರ್ಥನಾ ವೀರನಾಗಿ ಬೆಳಗುವದು ಹೇಗೆ? | 6-00 |
| 25. | ಮೀನು ಗಾಳ | 6-00 |
| 26. | ನನ್ನನ್ನು ಆಶೀರ್ವದಿಸು ಕರ್ತನೇ. | 6.00 |
| 27. | ದೇವಸೇವಕರಿಗೆ ಸಹಾಯ | 6.00 |
| 28. | ನರಕವನ್ನು ಕುರಿತು ಒಂದು ದೈವಿಕ ಪ್ರಕಟನೆ | 20.00 |
| 29. | ಸ್ತೋತ್ರ ಯಜ್ಞಗಳು ಸಾವಿರ | 10-00 |
| 30. | ಸಮಯವನ್ನು ಸಾರ್ಥಕ ಗೊಳಿಸಿರಿ | 6-00 |

| | | |
|---|---|---|
| 31. | ಸಂಕಟಗಳಿಂದ ಪಾರಾಗಿ ಉಲ್ಲಾಸದಿಂದಿರು | 6-00 |
| 32. | ಪವಿತ್ರಾತ್ಮನಿಂದ ಉಂಟಾಗುವ ಸಂತೋಷ | 6-00 |
| 33. | ಏಳು ಪ್ರಕಾಶಿಸು | 6-00 |
| 34. | ನಾನೂ ನನ್ನ ಮನೆಯವರೂ | 6-00 |
| 35. | ಸಮಾಧಾನ ಅಗತ್ಯವೇ | 6-00 |
| 36. | ಆತ್ಮದಾಪ್ತನ ಸಪ್ತ ನುಡಿಗಳು | 6-00 |
| 37. | ವಸ್ತ್ರಗಳನ್ನು ಕಾಪಾಡಿಕೋ | 6-00 |
| 38. | ಒಂಟಿತನವೇ | 6-00 |
| 39. | ಪವಿತ್ರ ಜೀವಿತ | 6-00 |
| 40. | ಪರಲೋಕವೇ ನನ್ನ ಸ್ವಾಸ್ತ್ಯವೇ | 6-00 |
| 41. | ದೀರ್ಘಕಾಲ ಪ್ರಾರ್ಥನೆಯಲ್ಲಿ | 6-00 |
| 42. | ನವಭಾಷೆಗಳ ವರಗಳು | 6-00 |
| 43. | ಉಜ್ಜೀವನ ಎಂದು? | 6-00 |
| 44. | ಕರ್ತನ ಚಿತ್ತವನ್ನು ಅರಿತುಕೊಳ್ಳುವದು ಹೇಗೆ ? | 6-00 |
| 45. | ಉಜ್ಜೀವನದ ಗೀತೆಗಳು | 6-00 |
| 46. | ದೇವದೂತರು | 6-00 |
| 47. | ಯುದ್ಧವು ಕರ್ತನದು | 6-00 |
| 48. | ಕ್ರಿಸ್ತೇಸುವಿನ ಮಹಿಮೆಯ ಬರೋಣ | 6-00 |
| 49. | ಯೌವನಸ್ಥನೇ ಎದ್ದೇಳು! | 6-00 |
| 50. | ಸ್ತುತಿಸೋಣ ಬನ್ನಿರಿ | 6-00 |
| 51. | ಪರಲೋಕ ಕ್ಷಮಿಸುವದೇ? | 6-00 |
| 52. | ಸತ್ಯತೆಯೂ ಪ್ರಾಮಾಣಿಕತೆಯೂ | 6-00 |
| 53. | ಜಯಕೊಡುವ ಕ್ರಿಸ್ತನ ರಕ್ತ. | 6.00 |
| 54. | ಸಫಲನಾದ ದೇವಸೇವಕ. | 6.00 |
| 55. | ನಾನು ಕಾವಲುಗಾರನೋ | 6.00 |
| 56. | ಕರ್ತನ ಕೈಬರಹ. | 6.00 |
| 57. | ನಂಬಿಕೆಯಿಂದ ಓಡುತ್ತಿದ್ದೇನೆ. | 6.00 |
| 58. | ಯಾರು? ಯಾರು? ಯಾರು? | 6.0 |
| 59. | ಉನ್ನತದಲ್ಲಿನ ಮಹೋನ್ನತ ಸ್ಥಳ | 6. |
| 60. | ವಾಗ್ದಾನಗಳ ದೇವರು | 6 |
| 61. | ಸೋಲಾ? ಗೆಲವಾ? | |

| | | |
|---|---|---|
| 62. | ಬೀಗದ ಕೈ | 6.00 |
| 63. | ಇಲ್ಲಿಗೆ ಏರಿ ಬಾ | 6.00 |
| 64. | ಅನುದಿನವೂ ಯೇಸುವಿನೊಂದಿಗೆ | 6.00 |
| 65. | ಶೋಧನೆಗಳಲ್ಲಿ ಯೇಸುವಿನ ಜಯ | 6.00 |
| 66. | ಯೋಬನ ಶೋಧನೆ | 6.00 |
| 67. | ಶೋಧನೆಯಲ್ಲಿ ತಿಳಿಯಬೇಕಾದ 4 ಸತ್ಯಗಳು | 6.00 |
| 68. | ಪುನರುತ್ಥಾನದ ಶಕ್ತಿ | 6.00 |
| 69. | ರಾಜಾಧಿರಾಜ ಯೇಸುಕ್ರಿಸ್ತನಿಗೆ ಒಂದು ಸಾಕ್ಷಿ | 6.00 |
| 70. | ಅಡಚಣೆಗಳನ್ನು ಒಡೆಯುವಾತನು | 6.00 |
| 71. | ಸ್ಮಿತ್ ವಿಗಲ್ಸ್‌ವರ್ತ್ | 6.00 |
| 72. | ಸಂತೈಸುವ ದೇವರು | 6.00 |
| 73. | ಆತ್ಮಗಳನ್ನು ವಿವೇಚಿಸುವದು ಹೇಗೆ? | 6.00 |
| 74. | ಹನೋಕನು | 6.00 |
| 75. | ಕಲ್ವಾರಿಯ ದೊಡ್ಡ ಹನಿಗಳು | 6.00 |
| 76. | ಬಿರುದನ್ನು ಪಡೆದುಕೊಳ್ಳಲು | 6.00 |
| 77. | ಯಜ್ಞದ ಒಡಂಬಡಿಕೆ | 6.00 |
| 78. | ಪ್ರಾರ್ಥನೆಯೇ ಪ್ರಾಣದ ನಾಡಿ | 6.00 |
| 79. | ಅಪರಿಚಿತ ವ್ಯಕ್ತಿಗಳು | 6.00 |
| 80. | ಇಸ್ರಾಯೇಲೇ ನೀನು ಧನ್ಯನು | 6.00 |
| 81. | ಸಿದ್ಧನಾಗಿರು, ಸಿದ್ಧಪಡಿಸು | 6.00 |
| 82. | ದೀನತೆಯ ಆಶೀರ್ವಾದಗಳು | 6.00 |
| 83. | ಅಗ್ನಿಯ ಅನುಭವಗಳು | 6.00 |
| 84. | ಸೇವಕರೊಂದಿಗೆ ಮನತೆರೆದು | 6.00 |
| 85. | ದಿಗ್ಭ್ರಮೆಗೊಳ್ಳದಿರು ಕಳವಳಗೊಳ್ಳದಿರು | 6.00 |
| 86. | ವಾಗ್ದಾನಗಳು ಸಾವಿರ | 10.00 |
| 87 | ಎರಡು ಪಾಲು ಆತ್ಮನ ವರ | 6.00 |
| 88. | ಕ್ರಿಸ್ತನ ಹಸ್ತಗಳು | 6.00 |
| 89. | ನಂಬಿಕೆಯೇ ನಮ್ಮ ಜಯ | 6.00 |
| 90. | ಏಳು ಹಬ್ಬಗಳು | 6.00 |
| 91. | ಕಳೆದು ಕೊಂಡದ್ದನ್ನು ಮರಳಿ ಪಡೆದುಕೋ | 6.00 |
| 92. | ಯೇಸುವಿನ ಮಧುರವಾದ ನುಡಿಗಳು 1000 | 10.00 |
| 93. | ಸಾಲಗಾರನೋ..... | 6.00 |
| 94. | ಎದ್ದೇಳು ಚೀಯೋನೇ | 6.00 |
| 95. | ಯೇಸು ಕ್ರಿಸ್ತನನ್ನು ಗಮನಿಸಿರಿ | 6.00 |
| 96. | ಉರಿದು ಪ್ರಕಾಶಿಸುವ ದೀಪ | 6.00 |
| 97. | ಅನುದಿನದ ಆಹಾರ(ಮಾಸಿಕ) | 60.00 |

# ಆಧ್ಯಾತ್ಮಿಕ ಪುಸ್ತಕಗಳು



ಆತ್ಮೀಕ ಜೀವಿತದಲ್ಲಿ ಬೆಳೆಯಲು ಮತ್ತು ಆತ್ಮನ ಬಲವನ್ನು ಹೊಂದಿಕೊಳ್ಳಲು ಆಧ್ಯಾತ್ಮಿಕ ಪುಸ್ತಕಗಳು ಅತ್ಯವಶ್ಯ.

ಸಹೋದರ ಸ್ಯಾಮ್ ಜೆಬದುರೈರವರು, ಸುಮಾರು 700ಕ್ಕಿಂತ ಹೆಚ್ಚು ತಮಿಳು ಪುಸ್ತಕಗಳನ್ನು ಬರೆದಿರುವರು.

ಹದಿನಾರು ವರುಷಗಳ ಕಾಲ ಸರ್ಕಾರಿ ಸೇವೆಯಲ್ಲಿ ತಮ್ಮ ಜೀವತವನ್ನು ಕಳೆದ ನಂತರ, ತಮ್ಮ ಉದ್ಯೋಗಕ್ಕೆ ರಾಜೀನಾಮೆ ನೀಡಿ, 1985ರಿಂದ ಇಚೆಗೆ ಅವರು ಪೂರ್ಣಾವಧಿ ಸೇವೆಯಲ್ಲಿ ತಮ್ಮನ್ನು ಕರ್ತನಿಗೆ ಮುಡಿಪಾಗಿಟ್ಟಿದ್ದಾರೆ. ಈ ಸೇವೆಯಲ್ಲಿ ಸಹೋದರ ಸ್ಯಾಮ್ ಜೆಬದುರೈರವರು ದೇವರ ವಾಕ್ಯವನ್ನು ಸಾರುವುದರ ಮೂಲಕ ಮತ್ತು ಬರವಣಿಗೆಯ ಮೂಲಕ ಸಾವಿರಾರು ಜನರನ್ನು ಕರ್ತನ ಬಳಿಗೆ ನಡೆಸಿದ್ದಾರೆ.

ಈ ಆಧ್ಯಾತ್ಮೀಕ ಪುಸ್ತಕಗಳಿಗೆ ಪ್ರೋತ್ಸಾಹ ನೀಡಿ, ಕನ್ನಡ ಭಾಷೆಯಲ್ಲಿ ಅವರ ಅನೇಕ ಪುಸ್ತಕಗಳು ಭಾಷಾಂತರವಾಗಿ ಹೊರ ಬರುವಂತೆ ತೀವ್ರವಾಗಿ ಕರ್ತನನ್ನು ಪ್ರಾರ್ಥಿಸಿರಿ.

ಈ ಪುಸ್ತಕಗಳಿಗಾಗಿಯೂ, ಎಂ.ಪಿ.3., ಸಿ.ಡಿ., ವಿ.ಸಿ.ಡಿ., ಗಳಿಗಾಗಿಯೂ ಮತ್ತು ನಮ್ಮಲ್ಲಿ ಪ್ರಕಟವಾಗುವ ಮಾಸಪತ್ರಿಕೆ "ಅನುದಿನದ ಆಹಾರ" ಎಂಬ ಕನ್ನಡ ದೈವಿಕ ಬರಹವನ್ನು ಹೊಂದಲು ನೀವು ಬಯಸುವುದಾದರೆ ಈ ಕೆಳಗಿನ ವಿಳಾಸಕ್ಕೆ ಬರಿಯಿರಿ. ಕರ್ತನು ನಿಮ್ಮನ್ನು ಆಶೀರ್ವದಿಸಲಿ.

**Selvin Christopher George**
24th 'F' Cross, Ejipura, Viveknagar,
Bangalore - 560 047. Ph: 080 - 25712448